ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

## ಪ್ರಕಾಶಕರ ಮಾತು

ಜನಸೇವೆ ಅಥವಾ ಸಮಾಜಸೇವೆಯನ್ನು ಎಲ್ಲ ಧರ್ಮಗಳೂ ತಂತಮ್ಮ ಅನುಯಾಯಿ
ಪ್ರೋತ್ಸಾಹಿಸುತ್ತವೆ. ಸೃಷ್ಟಿಸೇವೆಯಲ್ಲಿ ಇಸ್ಲಾಮ್ ಮುಂಚೂಣಿಯಲ್ಲಿದ್ದು, ಈ
ಕು ವಿವಿಧ ಸ್ತರಗಳಲ್ಲಿ ಅನುಸರಿಸಬೇಕಾದ ನೀತಿಯನ್ನು ಸ್ಪಷ್ಟಪಡಿಸಿದೆ. ಸೇವೆ ಸಲ್ಲಿಸಲು
ಥಮ ಅರ್ಹರಾದವರು ತಂದೆ ತಾಯಿಗಳಾಗಿದ್ದಾರೆ. ಅನಂತರ ಆಪ್ತಬಾಂಧವರು,
ಂಬದವರು, ಆ ಬಳಿಕ ಸಮಾಜದ ಬಡವರು, ನಿರ್ಗತಿಕರು, ವಿಧವೆಯರು, ಪ್ರಯಾಣಿಕರು,
ಕಾಲಿಕವಾಗಿರುವ ಸಹ ಪ್ರಯಾಣಿಕರು, ಮಾತ್ರವಲ್ಲ ಸೆರೆಯಲ್ಲಿರುವವರಿಗೆ ಕೂಡಾ
ಾಗುವಂತೆ ಇಸ್ಲಾಮ್ ಆದೇಶಿಸಿದೆ. ಹೆಚ್ಚೇಕೆ, ಪ್ರಾಣಿ - ಪಕ್ಷಿಗಳೊಂದಿಗೂ ಅನುಕಂಪ
ರುವಂತೆ ನಿರ್ದೇಶಿಸಲಾಗಿದೆ.

ಮಾನವನ ನೈಜ ಗುರಿ ಪರಲೋಕವಾಗಿದೆ. ಈ ಲೋಕದಲ್ಲಿ ಮಾಡುವ ಯಾವುದೇ
ರ್ಮ ನಿಸ್ವಾರ್ಥವಾಗಿದ್ದರೆ, ನಿಸ್ಪೃಹತೆಯಿಂದ ಕೂಡಿದ್ದರೆ ಹಾಗೂ ಅಲ್ಲಾಹನ ಸಂಪ್ರೀತಿಯ
ಕೆಯಿದ್ದರೆ ಮಾತ್ರ ಅದು ಪರಲೋಕದ ಶಾಶ್ವತ ಯಶಸ್ಸಿಗೆ ಕಾರಣವಾಗುವುದು, ಅದರ
ಲು ಯಾವುದೇ ಸ್ವಾರ್ಥ, ದುರುದ್ದೇಶ, ಹೆಸರು - ಖ್ಯಾತಿ ಹೊಂದುವ ಬಯಕೆ ಇದ್ದರೆ
ಸೇವಾ ಕಾರ್ಯಗಳು, ಅದಕ್ಕಾಗಿ ಪಟ್ಟ ಶ್ರಮಗಳೂ ನಿಷ್ಫಲವಾಗುವುದು.

ಸಮಾಜಸೇವೆಯನ್ನು ವೈಯಕ್ತಿಕವಾಗಿಯೂ ಮಾಡಬಹುದು. ಸಾಮೂಹಿಕವಾಗಿ ಸಂಘ
ಗಳ ಮೂಲಕವೂ ಮಾಡಬಹುದು. ಜನರಲ್ಲಿ ಪರಸ್ಪರ ಪ್ರೀತಿ, ಅನುಕಂಪ, ಕರುಣೆ
ನುಭೂತಿಯ ಗುಣಗಳು ಬೆಳೆದು ಬಂದರೆ, ಪರಸ್ಪರ ಸಹಾಯ - ಸಹಕಾರದಿಂದ
ಜದಲ್ಲಿ ಶಾಂತಿ ನೆಮ್ಮದಿ, ನೆಲೆ ನಿಲ್ಲುವುದು. ಸೇವಾ ಕಾರ್ಯಗಳಿಗೆ ದಾನಧರ್ಮ
ನ್ನೂ ಮಾಡಬೇಕಾಗುತ್ತದೆ. ಈ ಮೂಲಕ ಸಾಮೂಹಿಕವಾಗಿ ದೊಡ್ಡದೊಡ್ಡ ಕಲ್ಯಾಣಕಾರಿ
ಗಳನ್ನೂ ಮಾಡಬಹುದು. ಸಮಾಜದ ಹಕ್ಕಾಗಿ ಇಸ್ಲಾಮ್ 'ಝಕಾತ್' ಎಂಬ ಕಡ್ಡಾಯ
ವನ್ನು ನಿಶ್ಚಯಿಸಿದೆ. ಹಣವಂತರು ಆರ್ಥಿಕವಾಗಿ ಒಂದು ನಿರ್ದಿಷ್ಟ ಮಟ್ಟಕ್ಕೆ ತಲುಪಿದರೆ
ಂದ ಒಂದು ನಿರ್ದಿಷ್ಟ ಅಂಶವನ್ನು ಕಡ್ಡಾಯವಾಗಿ ಅದರ ಅರ್ಹರಿಗೆ ನೀಡಬೇಕು.
ನ್ನು ಇಸ್ಲಾಮ್ 'ಇಬಾದತ್'(ಆರಾಧನೆ) ಎಂದು ಪರಿಗಣಿಸಿದೆ. ಅದಕ್ಕೆ ಅಪಾರ ಪುಣ್ಯ
ವನ್ನು ಖಾತ್ರಿಪಡಿಸಲಾಗಿದೆ. ಸೃಷ್ಟಿಸೇವೆಯು ಇಸ್ಲಾಮಿನ ಅವಿಭಾಜ್ಯ ಅಂಗವಾಗಿದೆ.

'ಸಮಾಜಸೇವೆ' ಎಂಬ ಈ ಕೃತಿಯಲ್ಲಿ ಭಾರತದ ಸುಪ್ರಸಿದ್ಧ ವಿದ್ವಾಂಸರಾದ
ಲಾನಾ ಸಯ್ಯದ್ ಜಲಾಲುದ್ದೀನ್ ಉಮರಿಯವರು ಸೃಷ್ಟಿಸೇವೆಯ ಕುರಿತು ವಿಸ್ತಾರವಾಗಿ
ಸಿ, ಸೇವೆಯ ಎಲ್ಲ ಮಗ್ಗುಲುಗಳನ್ನೂ ಅನಾವರಣಗೊಳಿಸಿದ್ದಾರೆ. ಇದರ ಅಧ್ಯಯನದಿಂದ
ಜಸೇವೆಯ ಸ್ಫೂರ್ತಿಯು ಜನರಲ್ಲಿ ಉಂಟಾಗಬಹುದು. ಅದಕ್ಕೆ ಈ ಕೃತಿ ಸಹಾಯ
ಲೆಂದು ಹಾರೈಸುತ್ತೇವೆ.

ಶಾಂತಿ ಪ್ರಕಾಶನ

# ಮುನ್ನುಡಿ

ಇಸ್ಲಾಮ್ ವಿಶೇಷ ಮಹತ್ವ ನೀಡಿದ ವಿಷಯಗಳಲ್ಲಿ ಸಮಾಜ ಸೇವೆ
ಒಂದಾಗಿದೆ. ಅದು ಸೇವೆಯ ಮಹತ್ವವನ್ನು ಸ್ಪಷ್ಟಪಡಿಸಿತು. ಅದಕ್ಕಾಗಿ ಪ್ರೇರೇಪಿಸಿ
ಸೇವೆಯ ಕಿರುಕಲ್ಪನೆಯನ್ನು ಮಾತ್ರ ನೀಡಿದುದಲ್ಲ. ಬದಲಾಗಿ ನಮ್ಮ ಸೇವೆ ಮ
ಸದ್ವರ್ತನೆಗೆ ಅರ್ಹರಾದವರು ಯಾರೆಂಬುದನ್ನೂ ತಿಳಿಸಿತು. ಸರ್ವ ಮುಸ್ಲಿಮರು ಒ
ಉಮ್ಮತ್(ಸಮುದಾಯ) ಆಗಿದ್ದಾರೆ. ಅವರು ಪರಸ್ಪರ ದುಃಖ-ಸಂಕಷ್ಟಗಳಲ್ಲಿ ಭಾಗಿಯ
ಬೇಕೆಂದು ಅದು ಸಾರಿತು. ಅವರು ಸಕಲ ಮಾನವರ ಕಲ್ಯಾಣಕ್ಕಾಗಿ ನೇಮಿಸಲ್ಪಟ್ಟವ
ಅದರಿಂದ ಯಾವ ಮನುಷ್ಯನ ಬಗ್ಗೆಯೂ ಪಕ್ಷಪಾತ ತೋರಬಾರದು. ಅಗತ್ಯ ಬಂ
ಅವನಿಗೆ ಸಾಧ್ಯವಿರುವ ಸಹಾಯ ಸೇವೆ ಮಾಡಬೇಕೆಂಬುದನ್ನು ಮರೆಯಬಾರದು ಎಂ
ತಿಳಿಸಿತು. ಪ್ರತಿಯೊಬ್ಬನೂ ಸುಲಭದಲ್ಲಿ ತನ್ನ ಪಾತ್ರವನ್ನು ನಿರ್ವಹಿಸುವಂತಾಗಲು
ಎಲ್ಲ ರೀತಿಯ ಸಣ್ಣ-ದೊಡ್ಡ ಸೇವೆಗೆ ಪ್ರೇರಣೆ ನೀಡಿತು. ಜೊತೆಗೆ ಕಲ್ಯಾಣ ಕಾರ್ಯ
ಮಹತ್ವವನ್ನು ಜಾಗೃತಗೊಳಿಸಿ, ಅದರಲ್ಲಿ ವ್ಯಕ್ತಿ ಮತ್ತು ರಾಷ್ಟ್ರ ಎರಡನ್ನೂ ಪಾಲ್ಗೊಳಿಸಿ
ಸೇವಾ ಸ್ಫೂರ್ತಿಯು ತಪ್ಪು ಹಾದಿ ಹಿಡಿದರೆ ಉಂಟಾಗುವ ದೊಡ್ಡ ಅಸಮತೋಲನವ
ಅದು ನೀಗಿಸಿತು. ಸೇವೆಯ ಬಗೆಗಿನ ತಪ್ಪು ಕಲ್ಪನೆಗಳನ್ನು ದೂರೀಕರಿಸಿತು. ಧರ್ಮ
ಆಚಾರ-ವಿಚಾರಗಳಲ್ಲಿ ಅದರ ಸರಿಯಾದ ಸ್ಥಾನವನ್ನು ನಿಶ್ಚಯಿಸಿತು. ನಿಸ್ವಾರ್ಥ ಸೇ
ಸ್ಫೂರ್ತಿ ಹಾಗೂ ನಿಸ್ಪೃಹತೆಯ ಭಾವನೆಯನ್ನು ಸೃಷ್ಟಿಸಿತು.

ಈ ಗ್ರಂಥದಲ್ಲಿ ಕುರ್‌ಆನ್-ಹದೀಸ್‌ಗಳ ಬೆಳಕಿನಲ್ಲಿ ಈ ಎಲ್ಲ ವಿಷಯಗಳ ಕ
ಬೆಳಕು ಚೆಲ್ಲಲಾಗಿದೆ. ವಿಷಯಕ್ಕೆ ಸಂಬಂಧಿಸಿ ಆಯತ್-ಹದೀಸ್‌ಗಳನ್ನು ಅಳವ
ಸಂದರ್ಭಾನುಸಾರ ಅವುಗಳ ವಿವರಣೆಯನ್ನು ನೀಡಲು ಪ್ರಯತ್ನಿಸಲಾಗಿದೆ. ಇದು
ಆಧುನಿಕ ಕಾಲದ ಬೇಡಿಕೆಯ ಸಮಾಜಸೇವೆಯ ಅಂಶವನ್ನು ಪರಿಗಣಿಸಲಾಗಿದೆ. ಈ
ಚರ್ಚೆಯಲ್ಲಿ ಅಗತ್ಯ ಕಂಡಲ್ಲಿ ಫಿಕ್ಹ್, ಸೀರತ್ ಮತ್ತು ಅರ್ಥಕೋಶದ ಸಹಾಯವ
ಪಡೆಯಲಾಗಿದೆ.

ಈ ವಿಷಯಕ್ಕೆ ಸಂಬಂಧಿಸಿದಂತೆ 'ಮಾನವರ ಸೇವೆ' ಎಂಬ ನನ್ನ ಒ
ಕಿರುಹೊತ್ತಿಗೆ 1978ರಲ್ಲಿ ಪ್ರಕಟವಾಗಿದೆ. ಪಾಕಿಸ್ತಾನದಲ್ಲೂ ಅದು ಪ್ರಕಾಶನಗೊಂ
ಇಂತಹ ವಿಷಯದಲ್ಲಿ ಸಮಗ್ರವಾದ ಪುಸ್ತಕ ಇರಲಿಲ್ಲ ಎಂಬ ಕೊರತೆಯನ್ನು
ಗ್ರಂಥವು ಹೋಗಲಾಡಿಸುವುದೆಂದು ನಿರೀಕ್ಷಿಸುತ್ತೇನೆ. ಅಲ್ಲಾಹನು ಈ
ಪ್ರಯತ್ನವನ್ನು ಸ್ವೀಕರಿಸಲಿ ಮತ್ತು ಜನಸಾಮಾನ್ಯರು ಇದರಿಂದ ಹೆಚ್ಚೆಚ್ಚು ಪ್ರಯೋ
ಪಡೆಯುವಂತಾಗಲಿ ಎಂದು ಪ್ರಾರ್ಥನೆ.

ಡಾ. ಜಲಾಲುದ್ದೀನ್ ಉ

# ಪುಸ್ತಕದ ಪರಿಚಯ

ಇಸ್ಲಾಮ್ ವಿಶ್ವಾಸ ಮತ್ತು ಆರಾಧನೆಗೆ ಅತಿ ಹೆಚ್ಚು ಮಹತ್ವ ನೀಡಿದೆ. ವಿಶ್ವಾಸ ಯಾಗಿದ್ದರೆ ಮತ್ತು ಆರಾಧನೆಗಳ ಮೂಲಕ ಅಲ್ಲಾಹನೊಂದಿಗೆ ಸಂಬಂಧ ಸುಭದ್ರವಾದರೆ ಐರ ವಿಚಾರಗಳ ದಿಕ್ಕೂ ಸ್ವಾಭಾವಿಕವಾಗಿ ಸರಿಯಾಗಿರುತ್ತದೆ. ಬದುಕು ನೇರ ಮಾರ್ಗದಲ್ಲಿ ುತ್ತದೆ. ವಿಶ್ವಾಸ ಮತ್ತು ಆರಾಧನೆಗಳ ಬಳಿಕ ಇಸ್ಲಾಮ್ ನೀತಿ ಮತ್ತು ಕಾನೂನಿಗೆ ಳ ಹೆಚ್ಚು ಮಹತ್ವ ನೀಡುತ್ತದೆ. ಅದು ಉನ್ನತ ಚಾರಿತ್ರ್ಯ ಬೆಳೆಸಲು ಪ್ರೇರೇಪಿಸಿದೆ. ನವನ ಘನತೆ ಮತ್ತು ಔನ್ನತ್ಯಕ್ಕೆ ಉನ್ನತ ಚಾರಿತ್ರ್ಯ ಅತ್ಯಗತ್ಯವೆಂದು ಸಾರಿದೆ. ರ್ಡತೆಯ ಕೆಡುಕನ್ನು ಸ್ಪಷ್ಟಪಡಿಸಿ ಅದರಿಂದ ದೂರವಿರುವಂತೆ ಎಚ್ಚರಿಸಿದೆ. ಚಾರಿತ್ರ್ಯದ ನದಿಂದ ಮಾನವನು ದೇವನ ಮತ್ತು ಸೃಷ್ಟಿಗಳ ಪ್ರೀತಿಯಿಂದ ವಂಚಿತನಾಗುತ್ತಾನೆ. ನು ಯಾವ ರೀತಿಯಿಂದಲೂ ಅವರ ಪ್ರಿಯನಾಗಿರಲಾರ. ಜನಸೇವೆಯು ಚಾರಿತ್ರ್ಯದ ದು ಸ್ಪಷ್ಟ ಮುಖವಾಗಿದೆ. ಮಾನವನ ಸಂಕಷ್ಟ ಮತ್ತು ದುಃಖದಲ್ಲಿ ಪಾಲ್ಗೊಳ್ಳುವುದೇ ಸೇವೆಯಾಗಿದೆ. ಜನಸೇವೆಯ ಭಾವನೆಯು ದೇವನ ಸೃಷ್ಟಿಗಳ ನೆರವು ಮತ್ತು ಅನುಭೂತಿಗೆ ಪ್ರೇರೇಪಿಸುತ್ತದೆ ಮತ್ತು ಅವನಿಗೆ ಶಾಂತಿ ನೆಮ್ಮದಿ ನೀಡುತ್ತದೆ.

ಇಸ್ಲಾಮ್ ಆರಂಭದಿಂದಲೇ ಅಕ್ರಮ-ಅನ್ಯಾಯದ ವಿರುದ್ಧ ಧ್ವನಿಯೆತ್ತಿದೆ. ದುರ್ಬಲ ್ಗಗಳು ಮತ್ತು ವರ್ಗಗಳ ಹಕ್ಕುಗಳನ್ನು ವ್ಯಕ್ತಪಡಿಸಿದೆ. ಅವರ ಹಕ್ಕುಗಳಿಗೆ ಚ್ಯುತಿ ರದಂತೆ ಮತ್ತು ಎಲ್ಲ ಸ್ಥಿತಿಗಳಲ್ಲೂ ಅವರ ಹಕ್ಕುಗಳು ಪೂರೈಕೆಯಾಗುತ್ತಿರುವಂತೆ ಡಿಕೊಳ್ಳಬೇಕೆಂದು ಸಮಾಜಕ್ಕೆ ನಿರ್ದೇಶಿಸಿದೆ. ಅದಕ್ಕಾಗಿ ಸಮಗ್ರ ಮತ್ತು ಸುಭದ್ರ ಾನುಗಳನ್ನು ನೀಡಿ ಅದನ್ನು ಜಾರಿಗೊಳಿಸುವ ಹೊಣೆಯನ್ನು ರಾಷ್ಟ್ರಕ್ಕೆ ವಹಿಸಿಕೊಟ್ಟಿದೆ.

ಸೃಷ್ಟಿ ಸೇವೆ ಮತ್ತು ಮಾನವ ಕಲ್ಯಾಣದ ಮಾತೆತ್ತಿದಾಗ ಕ್ರೈಸ್ತ ಮಿಶನರಿಗಳ ಚಿತ್ರಣ ನಸ್ಸಿನಲ್ಲಿ ಮೂಡುತ್ತದೆ. ವಸ್ತುತಃ ಮಾನವಕುಲದ ಸೇವೆಯು ಅದಕ್ಕಿಂತಲೂ ಉನ್ನತ ನೆಯನ್ನು ನೀಡಿದೆ. ವ್ಯಕ್ತಿ, ಸಮಾಜ ಮತ್ತು ರಾಷ್ಟ್ರವನ್ನು ಅದರಲ್ಲಿ ಸೇರಿಸುತ್ತದೆ. ಈ ತು ಅದು ಎಷ್ಟು ವ್ಯಾಪಕವಾಗಿ ಚರ್ಚಿಸಿದೆ ಮತ್ತು ಯಾವ ಕೋನಗಳಿಂದ ಅದನ್ನು ತ್ಸಾಹಿಸಿದೆಯೋ ಅದರ ಉದಾಹರಣೆ ಬಹುಶಃ ಎಲ್ಲೂ ಕಾಣ ಸಿಗದು. 'ಸಮಾಜ ೆ' ಎಂಬ ಈ ಕೃತಿಯಲ್ಲಿ ಅದನ್ನೇ ಮುಂದಿಡಲು ಪ್ರಯತ್ನಿಸಲಾಗಿದೆ.

ಈ ಗ್ರಂಥದಲ್ಲಿ ಇಸ್ಲಾಮೀ ಶಿಕ್ಷಣದ ಬೆಳಕಿನಲ್ಲಿ ಸಮಾಜ ಸೇವೆಯ ಯಾವ ಶಗಳನ್ನು ಸ್ಪಷ್ಟಪಡಿಸಲಾಗಿದೆಯೋ ಅವು ಹೀಗಿವೆ-

1. ಮಾನವ ಸೇವೆಯು ಮಾನವನಲ್ಲಿರುವ ಸ್ವಾಭಾವಿಕ ಗುಣವಾಗಿದೆ. ಒಂದು ಪುಟ್ಟ ವಿನ ಸೇವೆಯನ್ನು ಅದರ ತಂದೆ ತಾಯಿಗಳು ಮತ್ತು ಆಪ್ತೇಷ್ಟರು ಅದೇ ಸ್ಫೂರ್ತಿಯೊಂದಿಗೆ ಡುತ್ತಾರೆ. ಅಲ್ಲಾಹನೊಂದಿಗಿನ ಸಂಬಂಧವು ಈ ಸ್ಫೂರ್ತಿಗೆ ಬಲ ನೀಡುತ್ತದೆ.

2. ಎಲ್ಲ ಕಾಲಗಳಲ್ಲೂ ಅಲ್ಲಾಹನ ಪ್ರವಾದಿಗಳು ಮತ್ತು ದೈವಿಕ ಗ್ರಂಥ
ಸಮಾಜಸೇವೆಯ ಶಿಕ್ಷಣ ನೀಡಿದ್ದಾರೆ. ಅಂತಿಮವಾಗಿ ಪವಿತ್ರ ಕುರ್‌ಆನ್ ಮತ್ತು ಪ್ರವ
ಮುಹಮ್ಮದ್(ಸ) ಅವರು ಇದರತ್ತ ವಿಶೇಷ ಗಮನ ಹರಿಸಿದ್ದಾರೆ. ಅದನ್ನು ಆಜ್ಞಾಪಿಸಿದ್ದಾ
ಅನುಕಂಪದ ಭಾವನೆಯನ್ನು ಉದ್ದೀಪನಗೊಳಿಸಿದ್ದಾರೆ. ಅದನ್ನು ದೇವ ಸಂಪ್ರೀತಿ
ಮಾಧ್ಯಮವೆಂದು ಪರಿಗಣಿಸಿದ್ದಾರೆ.

3. ಇಸ್ಲಾಮಿನ ದೃಷ್ಟಿಯಲ್ಲಿ ಜನಸೇವೆಯು ಇಬಾದತ್ ಆಗಿದೆ. ನಮಾಝ್ ಮ
ಝಕಾತನ್ನು ಕುರ್‌ಆನ್ ಒಟ್ಟೊಟ್ಟಿಗೆ ಪ್ರಸ್ತಾಪಿಸುತ್ತದೆ. ನಮಾಝ್‌ನಿಂದ ದೇವನೊಂ
ನೇರ ಸಂಬಂಧ ಬೆಳೆಯುತ್ತದೆ. ಝಕಾತ್ ಜನಸೇವೆಯ ಒಂದು ರೂಪವಾಗಿದೆ. ಈ
ಅದು ಎರಡೂ ವಸ್ತುಗಳ ಮಹತ್ವವನ್ನು ವಿವರಿಸಿದೆ. ಕೆಲವು ಸಂದರ್ಭಗಳಲ್ಲಿ ಆಥಿ
ಇಬಾದತ್ತನ್ನು ಶಾರೀರಿಕ ಇಬಾದತ್‌ನ ಬದಲಿಯಾಗಿ ಮಾಡಿದೆ. ಕೆಲವೊಮ್ಮೆ ಉಪವಾ
ಬದಲಿಯಾಗಿ ದಾನಧರ್ಮಗಳಿವೆ. ದಾನಧರ್ಮದ ಪ್ರಯೋಜನವು ನೇರವಾಗಿ ಮಾನವ
ತಲುಪುತ್ತದೆ.

4. ಇಸ್ಲಾಮ್ ಮುಸ್ಲಿಮರಿಗೆ ತಮ್ಮ ಸಮುದಾಯದವರ ಸೇವೆಯ ಆದೇಶ ಮಾ
ನೀಡಿದುದಲ್ಲ. ಬದಲಾಗಿ ಸಕಲ ಮಾನವರ ಸೇವೆಯ ಆಜ್ಞೆ ನೀಡಿದೆ.

5. ಜನಸೇವೆಯ ಆದೇಶದೊಂದಿಗೆ ಇಸ್ಲಾಮ್, ನಮ್ಮ ಅನುಕಂಪ ಮ
ಸಹಾಯಕ್ಕೆ ಯಾರೆಲ್ಲ ಅರ್ಹರು ಎಂಬುದನ್ನೂ ಸೂಚಿಸಿದೆ.

6. ಮಾನವನ ಹೆಚ್ಚಿನ ಆವಶ್ಯಕತೆಗಳು ಹಣಕಾಸಿನಿಂದ ಈಡೇರುತ್ತದೆ. ಆದ್ದರಿಂ
ಹಣಕಾಸಿನ ಮೂಲಕ ಸೇವೆಗೆ ವಿಶೇಷ ಮಹತ್ವವಿದೆ. ಆದರೆ ಸೇವೆಗೆ ಇದೇ ಒಂ
ರೂಪವಿರುವುದಲ್ಲ. ಹದೀಸ್‌ನ ಪ್ರಕಾರ, ಒಬ್ಬನು ತನ್ನ ಸಹೋದರನನ್ನು ನೊ
ಮುಗುಳ್ನಗುವುದು, ಒಳ್ಳೆಯ ಮಾತನ್ನಾಡುವುದು, ವಾಹನವೇರಲು ಸಹಾಯ ಮಾಡುವು
ಸಾಮಾನು ಎತ್ತಿ ಕೊಡುವುದು, ರಸ್ತೆಯಿಂದ ಕಲ್ಲು, ಮುಳ್ಳು ಮತ್ತಿತರ ಹಾನಿಕಾ
ವಸ್ತುಗಳನ್ನು ನೀಗಿಸುವುದು, ಯಾರಿಗಾದರೂ ದಾರಿ ತೋರಿಸುವುದು, ಯಾರದಾದ
ಪಾತ್ರೆಗೆ ನೀರು ತುಂಬಿಸಿಕೊಡುವುದು, ಒಳಿತನ್ನು ಆದೇಶಿಸುವುದು, ಕೆಡುಕನ್ನು ತಡೆಯುವು
ಎಲ್ಲವೂ ದಾನಧರ್ಮದ ವಿವಿಧ ರೂಪಗಳಾಗಿವೆ. ದಾನಧರ್ಮದಿಂದ ಸಮಾಜ ಸೇವೆ
ದಾರಿ ತೆರೆಯುತ್ತದೆ. ತಾತ್ವಿಕವಾಗಿ ಎಲ್ಲ ಒಳಿತಿನ ಕಾರ್ಯಗಳೂ ಸದಕಾ(ದಾನಧಮ
ಆಗಿದೆಯೆಂದು ಹೇಳಲಾಗಿದೆ.

7. ಸೇವೆಯು ತುರ್ತು ಮತ್ತು ತಾತ್ಕಾಲಿಕವೂ ಇರುತ್ತದೆ. ಉದಾ: ಹಸಿದವ
ಉಣಿಸುವುದು. ಬಾಯಾರಿದವನಿಗೆ ನೀರು ಕುಡಿಸುವುದು ಅಥವಾ ಊಟ ತಯಾರಿಸ
ಧಾನ್ಯ, ಉಪ್ಪು, ಇಂಧನ, ಪಾತ್ರೆಗಳಂತಹ ವಸ್ತುಗಳನ್ನು ಒದಗಿಸುವುದು, ನ
ಮರೆಸಲಿಕ್ಕಾಗಿ ಬಟ್ಟೆಬರೆಯ ವ್ಯವಸ್ಥೆ ಮಾಡುವುದು, ರೋಗಿಯ ಆರೈಕೆ ಮತ್ತು ಸಾ
ವಿರುವ ಔಷಧಿಯನ್ನು ಪೂರೈಸುವುದು ಇತ್ಯಾದಿ. ಕೆಲವೊಮ್ಮೆ ಈ ತುರ್ತು ಸಹಾಯ
ಮಹತ್ವ ಬಹಳ ಹೆಚ್ಚುತ್ತದೆ. ಅದರ ಬಗ್ಗೆ ಅನಾಸ್ಥೆಯು ನಿಷ್ಕ್ರಿಯತೆ ಮತ್ತು ನೈತಿಕ ಪತನ

ರಾವೆಯಾಗಿದೆ. ಇಸ್ಲಾಮ್ ಇದರತ್ತ ವಿಶೇಷ ಗಮನ ಸೆಳೆಯುತ್ತದೆ ಮತ್ತು ಅದರಲ್ಲಿ
ತಿಯೊಬ್ಬರಿಗೂ ಅವರವರ ಪಾಲನ್ನು ನೀಡಲು ಆದೇಶಿಸುತ್ತದೆ.

8. ಇಸ್ಲಾಮ್ ಮಾನವಕುಲದ ಸಂಕಷ್ಟಗಳಿಗೆ ಶಾಶ್ವತ ಪರಿಹಾರಕ್ಕೂ ಒತ್ತು ನೀಡಿದೆ.
ಬ್ಬ ದರಿದ್ರ ಮತ್ತು ವಿಧವೆಗೆ ಮಾಡುವ ತಾತ್ಕಾಲಿಕ ಸೇವೆಯು ಪುಣ್ಯ ಫಲಾರ್ಹವಾಗಿದೆ.
ದರೆ ಅವರ ಸಂಕಷ್ಟವನ್ನು ಶಾಶ್ವತವಾಗಿ ಪರಿಹರಿಸಲು ಪ್ರಯತ್ನಿಸುವುದು ಅಹೋರಾತ್ರಿಯ
ರಾಧನೆಗೆ ಸಮವಾಗಿದೆ. ಅದೇ ರೀತಿ ಓರ್ವ ಅನಾಥನ ತಲೆಯನ್ನು ಪ್ರೀತಿ ವಾತ್ಸಲ್ಯದೊಂದಿಗೆ
ವರಿಸುವುದು ದೊಡ್ಡ ಪುಣ್ಯ ಕಾರ್ಯವಾಗಿದೆ. ಅದರಿಂದ ಹೃದಯ ಮಿಡಿತ ಮತ್ತು
ನುಕಂಪ ಉಂಟಾಗುತ್ತದೆ. ಆದರೆ ಅವರ ಆರ್ಥಿಕ ಸಹಾಯ, ಶೈಕ್ಷಣಿಕ ಮತ್ತು ನೈತಿಕ
ೀಲ್ನೋಟವು ಸ್ವರ್ಗದಲ್ಲಿ ಪ್ರವಾದಿ(ಸ) ಅವರ ಸಾಮಿಪ್ಯಕ್ಕೆ ಹೇತುವಾಗಬಲ್ಲುದು.
ಡವರು ಹಾಗೂ ಅಪೇಕ್ಷಿತರನ್ನು ವ್ಯಾಪಾರದಲ್ಲಿ ತೊಡಗಿಸಲು ಅಥವಾ ತಾಂತ್ರಿಕತೆಯಲ್ಲಿ
ವರಿಗೆ ಸಹಕಾರ ನೀಡಲೂ ತಾಕೀತು ಮಾಡಲಾಗಿದೆ.

9. ಸೇವೆಯ ಅನೇಕ ಮುಖಗಳಿರಬಹುದು. ಆರ್ಥಿಕ ಸಹಾಯ, ಸಾಲ ನೀಡುವುದು,
ರುಪಾವತಿಗೆ ಪರಿಸ್ಥಿತಿಗನುಸಾರ ಕಾಲಾವಕಾಶ ನೀಡುವುದು, ಉಡುಗೊರೆ ನೀಡುವುದು,
ದು ಅಸಾಧ್ಯವೆಂದಾದರೆ ಯಾವುದಾದರೂ ವಸ್ತುವನ್ನು ಉಪಯೋಗಿಸಲಿಕ್ಕಾಗಿ ಉಚಿತವಾಗಿ
ಡುವುದು, ಅಗತ್ಯಾನುಸಾರ ಎರಡೆರಡು ವಸ್ತುಗಳನ್ನು ನೀಡುವುದು ಉದಾ: ಬೇಸಾಯಕ್ಕೆ
ರಡು ಎತ್ತುಗಳು, ಹಾಲು ಕರೆಯಲು ಎರಡು ಹಸು ಅಥವಾ ಎಮ್ಮೆ, ಯಾರನ್ನಾದರೂ
ಬಳಕ್ಕಾಗಿ ಕೆಲಸಕ್ಕೆ ನಿಲ್ಲಿಸುವ ಬದಲು ಅವನನ್ನು ವ್ಯಾಪಾರದಲ್ಲಿ ಪಾಲುದಾರನಾಗಿ
ಾಡುವುದು, ಕೃಷಿಯ ಉತ್ಪನ್ನಗಳಲ್ಲಿ ಪಾಲುದಾರನಾಗಿ ಮಾಡುವುದು. ಮರ್ದಿತರಿಗೆ
ನೂನು ಪರ, ನೈತಿಕ ಮತ್ತು ಆರ್ಥಿಕ ನೆರವು ಒದಗಿಸುವುದು ಇತ್ಯಾದಿ. ಈ ಅಂಶಗಳ
ರಿತು ಹದೀಸ್‌ಗಳಲ್ಲಿ ಸ್ಪಷ್ಟವಾಗಿ ಬೆಟ್ಟು ಮಾಡಲಾಗಿದೆ. ಇತರ ವಿಷಯಗಳನ್ನೂ ಇದೇ
ತಿ ಗ್ರಹಿಸಬಹುದು.

10. ಕಲ್ಯಾಣಕಾರಿ ಸೇವೆಗಳ ವ್ಯಾಪ್ತಿ ಬಹಳ ವಿಶಾಲವಾಗಿರುತ್ತದೆ. ಅದರಿಂದ ದೊಡ್ಡ
ಮಾಣದ ಪ್ರಯೋಜನ ಪಡೆಯಬಹುದು. ಈ ಸೇವೆಯನ್ನು ವ್ಯಕ್ತಿಗಳು, ಸಂಸ್ಥೆಗಳು
ಗೂ ಸರಕಾರ ಎಲ್ಲರೂ ಮಾಡುತ್ತಾರೆ. ಉದಾ: ಸ್ವಚ್ಛತಾ ಕಾರ್ಯ, ರಸ್ತೆ ನಿರ್ಮಾಣ,
ಸ್ತೆಗಳನ್ನು ಸುಲಭ ಸಂಚಾರಕ್ಕೆ ಯೋಗ್ಯ ಮಾಡುವುದು ಮತ್ತು ಸುರಕ್ಷತೆ ಒದಗಿಸುವುದು.
ರಿನ ವ್ಯವಸ್ಥೆ, ಮರ-ಗಿಡಗಳನ್ನು ನೆಡುವುದು ಇತ್ಯಾದಿ ಇದರಲ್ಲೇ ಕಾಡುಗಳ ರಕ್ಷಣೆಯೂ
ುತ್ತದೆ. ಭೂಮಿಯನ್ನು ಉಪಯೋಗಾರ್ಹಗೊಳಿಸುವುದು. ಮಸೀದಿ ಮದ್ರಸಗಳ
ರ್ಮಾಣ, ಆಸ್ಪತ್ರೆಗಳನ್ನು ತೆರೆಯುವುದು ಇತ್ಯಾದಿ. ಇಸ್ಲಾಮ್ ಅಂತಹ ಎಲ್ಲ ರೀತಿಯ
ಲ್ಯಾಣಕಾರಿ ಕೆಲಸಗಳತ್ತ ಗಮನ ಹರಿಸಿರುವುದು ಮಾತ್ರವಲ್ಲ ಅವುಗಳಿಗಾಗಿ ಆಸ್ತಿ ಅಥವಾ
ದಾಯ ಮೂಲಗಳನ್ನು ವಕ್ಫ್(ದಾನ) ಮಾಡಲು ಪ್ರೇರೇಪಿಸಿದೆ. ಅದಕ್ಕಾಗಿ ನಿಯಮ
ಬಂಧನೆಗಳನ್ನೂ ರಚಿಸಿದೆ.

11. ಸಮಾಜಸೇವಾ ಸಂಸ್ಥೆಗಳು, ಸೊಸೈಟಿಗಳು ಹಾಗೂ ಅದಕ್ಕಾಗಿ ಸಂಘಟನೆಗಳನ
ಮಾಡುವುದನ್ನು ಇಸ್ಲಾಮ್ ಪ್ರೋತ್ಸಾಹಿಸಿದೆ. ಈ ನಿಟ್ಟಿನಲ್ಲಿ ಇತರ ಧರ್ಮೀಯರ ಸಹಾ
ಪಡೆಯುವುದಕ್ಕೂ ಅನುಮತಿ ನೀಡಿದೆ. ಜನಸೇವಾ ಕಾರ್ಯಗಳ ಬಗೆಗಿನ ತಪ್ಪು ಕಲ್ಪನೆಗ
ಮತ್ತು ತಪ್ಪು ನೀತಿಯ ಸುಧಾರಣೆ ಮಾಡಿರುವುದು ಇಸ್ಲಾಮಿನ ಒಂದು ವಿಶೇ
ಕೊಡುಗೆ(Contribution)ಯಾಗಿದೆ. ಒಬ್ಬ ಮನುಷ್ಯನಿಗೆ ಇನ್ನೊಬ್ಬನ ಮೇಲಿರುವ ಹಕ್ಕುಗ
ಒಂದು ಸ್ವಾಭಾವಿಕ ಕ್ರಮವಿದೆ. ಅದನ್ನು ಗಮನಿಸಬೇಕೆಂದು ಇಸ್ಲಾಮ್ ಹೇಳುತ್ತ
ತಂದೆ-ತಾಯಿ, ಪತ್ನಿ, ಮಕ್ಕಳು ಮತ್ತು ಸಂಬಂಧಿಕರ ಹಕ್ಕುಗಳು ಇತರರಿಗಿಂತ ಮುಂ
ಇದೆ. ಪರಿಸರದ ಮತ್ತು ದೂರದ ಜನರ ಅಗತ್ಯಗಳ ಮತ್ತು ಹಕ್ಕುಗಳ ಕಡೆಗೆ ಗಮ
ಹರಿಸುವುದು, ಹತ್ತಿರದವರ ಹಕ್ಕುಗಳನ್ನು ಮರೆತು ಬಿಡುವುದು ಸರಿಯಾಗದು. ಅದೇ ರೀ
ಹತ್ತಿರದವರ ಪ್ರೀತಿಯಿಂದಾಗಿ ಸಮಾಜದ ಇತರ ಅರ್ಹರನ್ನು ಕಡೆಗಣಿಸುವುದೂ ಸರಿಯ

13. ಕೆಲವು ಮತ ಧರ್ಮಗಳಲ್ಲಿ ಸಾಮಾಜಿಕ ಜೀವನಕ್ಕೆ ಸಂಬಂಧಿಸಿ ಬಡವ-ಬಲ್ಲಿ
ಎಂಬ ಶಾಶ್ವತ ವಿಂಗಡನೆಯ ನೀತಿ ಅನುಸರಿಸಲಾಗಿದೆ. ಕೆಲವು ಧಾರ್ಮಿಕ ವರ್ಗಗ
ಭಿಕ್ಷಾಟನೆಯನ್ನೇ ಉದ್ಯೋಗವನ್ನಾಗಿ ಮಾಡಿವೆ. ಇಸ್ಲಾಮ್ ಈ ನೀತಿಯನ್ನು ವಿರೋಧಿಸುತ್ತ
ಅದು ಬಡವ-ಬಲ್ಲಿದ ಎಂಬ ವಿಂಗಡನೆಯನ್ನು ಅನ್ಯಾಯವೆಂದು ಬಗೆಯುತ್ತದೆ. ಅದ
ದೃಷ್ಟಿಯಲ್ಲಿ, ಒಂದು ವರ್ಗವು ಶಾಶ್ವತವಾಗಿ ತೀರಾ ಬಡತನದ ಜೀವನ ಸಾಗಿಸುವುದ
ಭಿಕ್ಷೆ ಬೇಡುವವರಾಗಿರುವುದು, ಇನ್ನೊಂದು ವರ್ಗ ಕೊಡುವವರಾಗಿರುವುದು ಅತೀ ದೊ
ಅನ್ಯಾಯವಾಗಿದೆ. ಕೆಲವೊಂದು ವಿಶಿಷ್ಟ ಸಂದರ್ಭಗಳಲ್ಲಿ ಮನುಷ್ಯ ಸಹಾಯ ಯಾಚ
ಬಹುದು. ಆದರೆ ಆದಷ್ಟು ಬೇಗ ಅದರಿಂದ ಮುಕ್ತಿ ಪಡೆಯಲು ಪ್ರಯತ್ನಿಸಬೇಕು.

14. ಕೆಲವು ಧರ್ಮಗಳು ಸಮಾಜಸೇವೆಯನ್ನೇ ಧರ್ಮ ಅಥವಾ ಧರ್ಮ
ತಿರುಳೆಂದು ಭಾವಿಸುತ್ತವೆ. ಕೆಲವು ಧರ್ಮಗುರುಗಳ ಬಗ್ಗೆ ಸೇವೆಯು ಅವರ ಧರ್ಮವ
ತ್ತೆಂದು ಹೇಳಲಾಗುತ್ತದೆ. ಇದು ಸುಧಾರಣೆಯಾಗಬೇಕಾದ ನೀತಿಯಾಗಿದೆ. ಜನಸೇವೆ
ಎಲ್ಲಾ ಮಹತ್ವಗಳ ಹೊರತಾಗಿಯೂ ಅದುವೇ ಸಂಪೂರ್ಣ ಧರ್ಮವೆಂದು ಇಸ್ಲಾವ
ಹೇಳುವುದಿಲ್ಲ. ಧರ್ಮದ ಒಂದು ಭಾಗವೆಂದು ಅದು ಪರಿಗಣಿಸುತ್ತದೆ.

15. ಕೊನೆಯದಾಗಿ, ಇಸ್ಲಾಮಿನ ದೃಷ್ಟಿಯಲ್ಲಿ ಪ್ರಾಮಾಣಿಕವಾಗಿ ದೇವಸಂಪ್ರೀತಿಗಾ
ಮಾಡುವ ಕಾರ್ಯಗಳೇ ಸ್ವೀಕಾರಾರ್ಹವಾಗಿದೆ. ಹೆಸರು ಗಳಿಸುವ ಉದ್ದೇಶದಿಂದ ಅಥ
ತೋರಿಕೆಯ ಕಾರ್ಯಗಳು ಅಲ್ಲಾಹನ ಬಳಿ ತಿರಸ್ಕೃತವಾಗುವುದು ಮಾತ್ರವಲ್ಲ ಅವನ
ಶಿಕ್ಷಾರ್ಹವೂ ಆಗಿರುವುದು. ಜನಸೇವೆಯು ಎಷ್ಟು ಮಹತ್ವದ ಕಾರ್ಯವೋ ಅ
ಅದರಲ್ಲಿ ಪ್ರಾಮಾಣಿಕ ಮತ್ತು ದೇವ ಸಂಪ್ರೀತಿಯ ಆಕಾಂಕ್ಷೆ ಇರಬೇಕು. ಇದರ
ಪ್ರಾಮಾಣಿಕತೆಯನ್ನು ಉಳಿಸಿಕೊಳ್ಳುವುದು ಕಷ್ಟವಾದರೂ ಅದರ ಹೊರತು ಪುಣ್ಯ
ನಿರೀಕ್ಷೆ ಇಡುವಂತಿಲ್ಲ.

ಮುಂದಿನ ಪುಟಗಳಲ್ಲಿ ಅದರ ವಿವರಣೆಗಳು ನಿಮ್ಮ ಮುಂದೆ ಬರಲಿದೆ.

# ಅನುಕ್ರಮಣಿಕೆ

## ಎಲ್ಲರ ಸೇವೆ

# ಸೇವಾ ಸ್ಫೂರ್ತಿ ಮತ್ತು ಇಸ್ಲಾಮಿನ ಪಾತ್ರ

## ೕವಾ ಮನೋಭಾವವು ನೈಸರ್ಗಿಕ ಸ್ಫೂರ್ತಿಯಾಗಿದೆ

ಅಲ್ಲಾಹನ ಅಸಂಖ್ಯಾತ ಸೃಷ್ಟಿಗಳ ಪೈಕಿ ಮಾನವನು ಅತ್ಯಂತ ಶ್ರೇಷ್ಠ ಮತ್ತು ನ್ನತ ಸೃಷ್ಟಿಯಾಗಿದ್ದಾನೆ. ಇಲ್ಲಿ ಅವನದೇ ಸೇವೆಯ ಪ್ರಸ್ತಾಪವಿದೆ. ಒಂದು ಮನೆಯಲ್ಲಿ ುಗು ಹುಟ್ಟಿದಾಗ ಮನೆಯವರೆಲ್ಲ ಸಂತೋಷಗೊಳ್ಳುತ್ತಾರೆ. ದೂರದ ಮತ್ತು ಹತ್ತಿರದ ಂಬಂಧಿಕರು ಅಭಿನಂದನೆ ಸಲ್ಲಿಸುತ್ತಾರೆ. ಹೆತ್ತವರು ಮತ್ತು ಆಪ್ತ ಬಂಧುಗಳು ತಮ್ಮ ಮರ್ಥ್ಯಕ್ಕೆ ತಕ್ಕಂತೆ ಅದರ ಸೇವೆಯಲ್ಲಿ ತೊಡಗುತ್ತಾರೆ. ಮಾತನಾಡಲಾರದ ಅಸಹಾಯಕ ುಗುವಿನ ಹಸಿವು, ಬಾಯಾರಿಕೆಗಳ ಕಡೆಗೆ ಗಮನ ಹರಿಸುತ್ತಾರೆ. ಅದರ ನೋವು ಸಂಕಷ್ಟ ನ್ನರಿತು ಅದನ್ನು ನೀಗಿಸಲು ಪ್ರಯತ್ನಿಸುತ್ತಾರೆ. ಚಿಕಿತ್ಸೆಯ ಅಗತ್ಯವಿದ್ದರೆ ತಮ್ಮ ಮರ್ಥ್ಯಕ್ಕನುಸಾರ ಚಿಕಿತ್ಸೆಯನ್ನು ಕೊಡಿಸಲಾಗುತ್ತದೆ. ಅದನ್ನು ಶುಚಿಯಾಗಿಡಲು, ಅದರ ಲಸುಗಳನ್ನು ಹೋಗಲಾಡಿಸಲು ಯಾವುದೇ ಸಂಕೋಚ ತೋರಲಾಗುವುದಿಲ್ಲ. ಮಗು ಲ್ಪ ದೊಡ್ಡದಾಗುವಾಗ ಅದರ ಆಸಕ್ತಿ, ತುಂಟತನ ಹಾಗೂ ಅದರ ಗುಲ್ಲು ಗದ್ದಲ ನ್ನು ಸಸಂತೋಷ ಸಹಿಸಲಾಗುತ್ತದೆ. ಇನ್ನೂ ಸ್ವಲ್ಪ ದೊಡ್ಡದಾಗುವಾಗ ಅದರ ಶಿಕ್ಷಣ ರಬೇತಿ ಮತ್ತು ಅಭಿವೃದ್ಧಿಯ ಚಿಂತೆ ಉಂಟಾಗುತ್ತದೆ. ಒಟ್ಟಿನಲ್ಲಿ, ಪ್ರಯತ್ನಕ್ಕೆ ತಕ್ಕಂತೆ ದರ ಅಗತ್ಯಗಳು ಈಡೇರಬೇಕು, ಅದರ ಸರಿಯಾದ ಬೆಳವಣಿಗೆಯಾಗಬೇಕು. ಚೆನ್ನಾಗಿ ದು ಮುಂದೆ ಯಶಸ್ವಿ ಜೀವನ ಸಾಗಲು ಸಮರ್ಥವಾಗಬೇಕೆಂಬ ಪ್ರಯತ್ನವಿರುತ್ತದೆ. ದರಲ್ಲಿ ಯಾವುದೇ ಅಂಶ ಕಡಿಮೆಯಾದರೆ ಅದನ್ನು ಪ್ರೀತಿಸುವವರಿಗೆ ಕಳವಳವುಂಟಾಗುತ್ತದೆ. ಗು ಶ್ರೀಮಂತ, ಆಡಳಿತಗಾರ ಅಥವಾ ಭೂಮಾಲಿಕನದ್ದಾಗಿದ್ದರೆ ಅದೇ ಮಟ್ಟದಲ್ಲಿ ದರ ಸೇವೆಗೈಯಲಾಗುತ್ತದೆ. ಅದರ ಅಗತ್ಯಗಳನ್ನು ಹೆಚ್ಚು ಆಸಕ್ತಿಯಿಂದ ಪೂರೈಸಲಾಗುತ್ತದೆ. ದಕ್ಕೆ ಸ್ವಲ್ಪವೇನಾದರೂ ತೊಂದರೆಯಾದರೆ ತಂದೆ, ತಾಯಿ, ಆಪ್ತೇಷ್ಟರು ಮಾತ್ರವಲ್ಲ, ದಕ್ಕೆ ಸುಖ ಸೌಕರ್ಯವೊದಗಿಸಲು ಸೇವಕರ ಮತ್ತು ದಾದಿಯರ ದಂಡೇ ಇರುತ್ತದೆ.

ಈ ಸೇವೆ ಮತ್ತು ತ್ಯಾಗಕ್ಕೆ ಮಗು ತಮ್ಮದು, ತಮ್ಮ ಬಂಧುಗಳದ್ದು ಮತ್ತು ುಂಬದ್ದು ಎಂಬುದೇ ಕಾರಣವಾಗಿದೆ. ಅದರ ಬೆಳವಣಿಗೆ, ಶಿಕ್ಷಣ ತರಬೇತಿ ಮತ್ತು ಭಿವೃದ್ಧಿಗಾಗಿ ಪ್ರಯತ್ನಿಸುವುದು ನಮ್ಮ ಕರ್ತವ್ಯವೆಂದು ಭಾವಿಸಲಾಗುತ್ತದೆ. ಇದೊಂದು ಭಾವಿಕ ಪ್ರೇರಣೆಯಾಗಿದ್ದು ಮಾನವನ ಒಳಗಿನಿಂದ ಮೂಡುತ್ತದೆ. ಆದ್ದರಿಂದ

ಮಾನವನ ಈ ಪಾವನ ಮನೋಭಾವವನ್ನು ಲೋಕವು ಮೆಚ್ಚಿದೆ. ಅದು ದುರ್ಬಲಗೊಳ್ಳುವು
ಮಾನವ ಪೀಳಿಗೆಯ ಮಟ್ಟಿಗೆ ಬಹಳ ನಷ್ಟದಾಯಕವಾಗಿದೆ. ಒಂದು ವೇಳೆ ಇದು
ಬಿಟ್ಟರೆ ಅಥವಾ ಇಲ್ಲವಾದರೆ ಜಗತ್ತಿನ ತೇಜಸ್ಸು ಮಾಯವಾಗಿ ಅಂಧಕಾರ ಕವಿಯುವುದ

## ಮಗುವಿನ ಮುಗ್ಧ ಪ್ರಕೃತಿ

ಮಗುವಿನೊಂದಿಗೆ ಈ ಭಾವನಾತ್ಮಕ ಸಂಬಂಧಕ್ಕೆ ಅದು ಮುಗ್ಧ ಪ್ರಕೃತಿಯದ್ಾ
ರುವುದೇ ಕಾರಣ. ಅದರ ಮನಸ್ಸು ಮಾನವರೊಳಗೆ ಅಂತರ ಸೃಷ್ಟಿಸುವ ಹಾಗೂ ವ
ವಿದ್ವೇಷ ಮತ್ತು ಕ್ಷೋಭೆಗೆ ಕಾರಣವಾಗುವಂತಹ ಎಲ್ಲ ಕೆಟ್ಟ ಭಾವನೆಗಳಿಂದ ಮುಕ್ತವಾ
ರುತ್ತದೆ. ಅದು ಯಾವುದೇ ವಸ್ತುವನ್ನು ತನ್ನದೆಂದು ವಾದಿಸುವುದಿಲ್ಲ. ಅದಕ್ಕೆ ಯ
ಬಗ್ಗೆ ಆಕ್ಷೇಪವೋ ಜಗಳವೋ ಇರುವುದಿಲ್ಲ. ಅದಕ್ಕೆ ವಂಚನೆಯ ಅರಿವಿರುವುದೀ
ಯಾರಿಗಾದರೂ ಕೊಡೋಣವೆಂದರೆ ಅದಕ್ಕೆ ಯಾವುದರ ಮೇಲೂ ಒಡೆತನವಿರುವುದೀ
ಅದು ಪ್ರೀತಿಯನ್ನು ಕೊಡ ಬಲ್ಲುದು. ಮುಗುಳ್ನಗು ಬೀರಬಹುದು. ಹಾಗೆ ಮಾಡುತ್ತ
ಕೂಡಾ. ಹಾಗಿರುವಾಗ ಅದನ್ನು ಯಾರಾದರೂ ಪ್ರೀತಿಸದಿರುವುದಾದರೂ ಹೇಗೆ? ಅದ
ದೂಷಿಸುವುದಾದರೂ ಏತಕ್ಕೆ?

## ನಿಸರ್ಗದಿಂದ ವಿಮುಖತೆಯ ಆರಂಭ

ದಿನಗಳುರುಳಿದಂತೆಯೇ ಮಗು ಬೆಳೆಯುತ್ತಾ ಪ್ರೌಢಾವಸ್ಥೆಗೆ ತಲುಪುತ್ತದೆ. ಬುದ್ಧಿಯ
ಬೆಳೆದಿರುತ್ತದೆ. ಅವನಲ್ಲಿ ತನ್ನ ವ್ಯಕ್ತಿತ್ವದ ಚಿಂತೆ ಕಾಡುತ್ತದೆ. ಸ್ವಾತಂತ್ರ್ಯ ಪ್ರಜ್ಞೆ ಆರಂ
ವಾಗುತ್ತದೆ. ಇತರರ ವಿಚಾರಗಳಿಗೆ ಆತ ಬದ್ಧನಾಗಿರುವುದಿಲ್ಲ. ಈ ಬಗ್ಗೆ ತನ್ನ ಆಪ್ತೇ
ರಿಂದಲೂ ಭಿನ್ನಾಭಿಪ್ರಾಯ ಹೊಂದಿರುತ್ತಾನೆ. ಅವನಿಗೆ ತನ್ನದೇ ಭಾವನೆಗಳಿದ್ದು ಅ
ಅಡ್ಡಿಯಾಗುವುದು ಅವನಿಗೆ ಇಷ್ಟವಿರುವುದಿಲ್ಲ. ಅವನು ಇತರರ ಅಭಿಲಾಷೆಗಳನ್ನು ಲೆಕ್ಕಿ
ವುದಿಲ್ಲ, ಅವನು ತನ್ನದೇ ಆದ ಅಭಿಲಾಷೆಗಳೊಂದಿಗೆ ಸಾಗುತ್ತಾನೆ. ಅವನಿಗೆ ತ
ಹಕ್ಕುಗಳ ಬಗ್ಗೆ ಜಾಗೃತಿ ಮೂಡುತ್ತದೆ. ಅದನ್ನು ಬಿಟ್ಟು ಕೊಡಲು ಅವನು ಸಿದ್ಧನಿ
ವುದಿಲ್ಲ. ತನ್ನ ಹಿತವನ್ನು ಯಾವ ಬೆಲೆ ತೆತ್ತಾದರೂ ರಕ್ಷಿಸ ಬಯಸುತ್ತಾನೆ. ಇನ್ನ
ಮುಂದುವರಿದಾಗ ಅವನಲ್ಲಿ ದುರಾಸೆ ಉಂಟಾಗುತ್ತದೆ. ಅದನ್ನು ತಣಿಸಲು ಕೆಲವೊ
ವಾಮಮಾರ್ಗಗಳನ್ನು ಅವಲಂಬಿಸಲು ಅವನು ಹೇಸುವುದಿಲ್ಲ. ನಿಸ್ಪೃಹತೆಯು ಅವನಿ
ಹೊರಟು ಹೋಗಿರುತ್ತದೆ. ಅವನ ಯಾವುದೇ ಕ್ರಮವು ಉದ್ದೇಶರಹಿತವಾಗಿರುವುದೀ
ಜನರೊಂದಿಗೆ ಅವನ ವ್ಯವಹಾರವು ಕೇವಲ ತನ್ನ ಹಿತಕ್ಕಾಗಿರುತ್ತದೆ. ಅವನ ಪ್ರೀತಿ, ದ್ವೆ
ಎಲ್ಲವೂ ಅದನ್ನೇ ಅವಲಂಬಿಸಿರುತ್ತದೆ. ಇತರರೂ ಅವನನ್ನು ಸ್ವಾರ್ಥಿಯಾಗಿ ಗುರುತಿಸುತ
ಮತ್ತು ತಮ್ಮ ಪ್ರತಿಸ್ಪರ್ಧಿಯಾಗಿ ಕಾಣುತ್ತಾರೆ.

ಈ ರೀತಿ ಪ್ರೀತಿ, ಸಹಾನುಭೂತಿ, ಸೇವೆ ಮತ್ತು ತ್ಯಾಗ ಬಲಿದಾನಗಳ ವಾತಾವ
ಮೆಲ್ಲಮೆಲ್ಲನೆ ಬದಲಾಗುತ್ತದೆ. ಕೆಲವೊಮ್ಮೆ ಭಾವನೆಗಳ ಲೋಕವೇ ಅಡಿಮೇಲಾಗುತ್ತ

ಪ್ತ ಬಂಧುಗಳು, ಸ್ವಂತ ಸಹೋದರರು ಮಾತ್ರವಲ್ಲ ಹೆತ್ತವರು ಮತ್ತು ಮಕ್ಕಳೊಂದಿಗೂ ರಸವುಂಟಾಗಿ ಬಿಡುತ್ತದೆ. ಪ್ರೀತಿ, ತ್ಯಾಗ ಮತ್ತು ಸೇವೆಯ ಬದಲು ಹಗೆತನ, ಪ್ರತೀಕಾರ ುತ್ತು ಕಿರುಕುಳವು ಸ್ಥಾನ ಪಡೆಯುತ್ತದೆ. ಪ್ರೀತಿಯ ಹೊನಲು ಹರಿಸುತ್ತಿದ್ದ ಮಗು ಈಗ ್ವೇಷದ ಜ್ವಾಲೆಗಳನ್ನು ಸುರಿಸುತ್ತಿದ್ದಾನೆ. ಅವನನ್ನು ಎದೆಗಪ್ಪಿಕೊಳ್ಳುತ್ತಿದ್ದವರೇ ಅವನಿಂದ ಊರವಿರ ಬಯಸುತ್ತಾರೆ.

## ಸ್ಲಾಮಿನ ಸುಧಾರಣಾ ಕ್ರಮ

ಮಾನವನಿಗೆ ಜೀವಮಾನವಿಡೀ ಅವನು ಈ ಲೋಕಕ್ಕೆ ಬರುವಾಗ ಸಿಕ್ಕಿರುವಂತಹ ್ರೀತಿ ಲಭಿಸಬೇಕು ಮತ್ತು ಸ್ವಾರ್ಥ ಹಿತಾಸಕ್ತಿಗಳು ಈ ಪ್ರೀತಿಗೆ ಅಡ್ಡಿಯಾಗಿ ಅದನ್ನು ಾನೆಗೊಳಿಸುವಂತಾಗಬಾರದೆಂದು ಎಲ್ಲ ಧರ್ಮಗಳೂ ಪ್ರಯತ್ನಿಸಿವೆ. ಅವನು ದುರ್ಬಲ ಗಿದ್ದರೆ ಅವನ ಸೇವೆ ಮಾಡಬೇಕು. ಅವನು ಶಕ್ತನೂ ಬಲಶಾಲಿಯೂ ಆಗಿದ್ದರೆ ಇತರರ ವೆ ಮಾಡಬೇಕು. ಅವನು ಅಸಹಾಯಕನಾಗಿದ್ದರೆ ಅವನಿಗೆ ನೆರವಾಗಬೇಕು. ಅವನ ುಲ್ಲಿ ಅಧಿಕಾರ ಬಂದರೆ ಇತರರಿಗೆ ಸಹಾಯ ಮಾಡಬೇಕು. ಈ ವಿಷಯದಲ್ಲಿ ಸ್ಲಾಮಿನ ಪಾತ್ರ ಅಪ್ರತಿಮವಾಗಿದೆ. ಅದರ ಸ್ವಲ್ಪ ವಿವರಣೆಯನ್ನು ಇಲ್ಲಿ ಕೊಡಲಾಗಿದೆ.

## ೀವನೊಂದಿಗೆ ಸಂಬಂಧದಿಂದ ಸೇವಾ ಮನೋಭಾವ ಬಲಗೊಳ್ಳುತ್ತದೆ

ಮಾನವನೊಳಗೆ ಸೇವಾ ಮನೋಭಾವವಿದೆಯೆಂಬುದರಲ್ಲಿ ಸಂದೇಹವಿಲ್ಲ. ಆದರೆ ಹಿತಾಸಕ್ತಿ, ವೈಯಕ್ತಿಕ ಮತ್ತು ವರ್ಗೀಯ ಸ್ವಾರ್ಥ ಹಾಗೂ ಚಿತ್ತಾಕಾಂಕ್ಷೆಗಳು ಈ ನೋಭಾವವನ್ನು ಹಿಂದಿಕ್ಕುತ್ತದೆ. ಅವನಿಗೆ ತನ್ನಂತೆಯೇ ಇರುವ ಮಾನವರ ಮೇಲೆ ್ರಮ-ಅತ್ಯಾಚಾರಗಳನ್ನೆಸಗಲೂ ಸಂಕೋಚವಾಗುವುದಿಲ್ಲ. ಕೆಲವೊಮ್ಮೆ ಅವನು ್ರರ್ಯಕ್ಕೂ ಇಳಿಯುತ್ತಾನೆ. ಇಸ್ಲಾಮಿನ ದೃಷ್ಟಿಯಲ್ಲಿ ಶುದ್ಧ ಮನಸ್ಸಿನೊಂದಿಗೆ ದೇವನ ಾಧನೆ ಮತ್ತು ಅವನೊಂದಿಗೆ ಸಂಬಂಧದಿಂದ ಮಾನವನು ಈ ದೌರ್ಬಲ್ಯಗಳ ್ಲೆ ನಿಯಂತ್ರಣ ಸಾಧಿಸಬಲ್ಲನು. ದೇವ ಪ್ರೇಮವು ತುಂಬಿರುವ ಹೃದಯವು ಅವನ ಸರನ್ನು ಪ್ರೀತಿಸದಿರಲು ಸಾಧ್ಯವಿಲ್ಲ. ದೇವನೊಂದಿಗೆ ಮಾನವನ ಸಂಬಂಧವು ಎಷ್ಟು ಿಷ್ಠವಾಗಿರುವುದೋ ಮಾನವರೊಂದಿಗೂ ಅವನ ಸಂಬಂಧ ಅಷ್ಟೇ ಬಲಿಷ್ಠ ಗಿರುವುದು. ಆದ್ದರಿಂದಲೇ ಕುರ್‌ಆನ್ ಮಾನವರ ಹಕ್ಕುಗಳು, ಅವರ ಸೇವೆ ಮತ್ತು ರರೊಂದಿಗೆ ಸದ್ವರ್ತನೆ ತೋರುವ ಬಗ್ಗೆ ಪ್ರಸ್ತಾಪಿಸಿರುವಲ್ಲೆಲ್ಲಾ, ಅದರ ಹಿಂದೆ ವಾ ಮುಂದೆ ಅಲ್ಲಾಹನ ಆರಾಧನೆ, ತಕ್ವಾ(ದೇವ ಭಯ) ಮತ್ತು ನಮಾಝನ್ನು ಸ್ತಾಪಿಸುತ್ತದೆ.[1] ಇದು ಅಲ್ಲಾಹನ ಆರಾಧನೆ ಮತ್ತು ಅವನೊಂದಿಗೆ ಸಂಬಂಧವು ಾನವನಲ್ಲಿ ಇತರ ಮಾನವರ ಹಕ್ಕುಗಳನ್ನು ಗುರುತಿಸುವ ಮತ್ತು ಅವರ ಸೇವೆಗೈಯುವ ್ಪೂರ್ತಿಯನ್ನುಂಟು ಮಾಡುತ್ತದೆ ಎಂಬುದರ ಸಂಕೇತವಾಗಿದೆ. ಈ ಸಂಬಂಧ ದುರ್ಬಲ

1. ಇದರ ಅನೇಕ ಉದಾಹರಣೆಗಳು ಈ ಗ್ರಂಥದಲ್ಲಿದೆ.

ಅಥವಾ ಮಂದವಾದರೆ ಅದರ ನಂತರ ಆ ಹಕ್ಕುಗಳನ್ನು ಪೂರೈಸುವುದರಲ್ಲಿ ನಿರ್ಲ
ಹಾಗೂ ಅನಾಸ್ಥೆಯುಂಟಾಗುವುದು ಖಚಿತ. ಅಲ್ಲಾಹನನ್ನು ಮತ್ತು ಅವನ ಅಸಂಖ್ಯಾ
ಉಪಕಾರಗಳನ್ನು ಮರೆತು ಬಿಟ್ಟವನು ಆತನ ದಾಸರ ಉಪಕಾರಗಳನ್ನೂ ಕಡೆಗ
ದಿರಲಾರನು. ಅವನ ಕೈಯಲ್ಲಿ ಈ ಹಕ್ಕುಗಳು ನಷ್ಟವಾದರೆ ಅದರಲ್ಲಿ ಆಶ್ಚರ್ಯವಿ

## ದೇವನ ನಿಷ್ಠ ದಾಸರು ಪ್ರಾಮಾಣಿಕ ಸೇವೆಗೈಯುತ್ತಾರೆ

ದೇವಭಯವುಳ್ಳವರು ಮತ್ತು ಅವನ ಉಪಾಸನೆ ಮಾಡುವವರು ಮಾನವರೊಂ
ಉತ್ತಮವಾಗಿ ವರ್ತಿಸುತ್ತಾರೆ ಎಂಬುದನ್ನು ಪವಿತ್ರ ಕುರ್‌ಆನ್ ಮಾನವ ಇತಿಹಾ
ಆಧಾರದಲ್ಲಿ ನಮ್ಮ ಮುಂದಿಡುತ್ತದೆ. ಅವರು ಯಾರದೇ ಹಕ್ಕು ಕಬಳಿಸುವುದಿ
ಯಾರ ಮೇಲೂ ಅತಿರೇಕವೆಸಗುವುದಿಲ್ಲ. ಅಕ್ರಮ-ಅನ್ಯಾಯಗಳು ಅವರಿಂದ ಸಂಭವಿ
ವುದಿಲ್ಲ. ಅವರು ಸ್ವಾರ್ಥ ಅಥವಾ ಬಾಹ್ಯ ಒತ್ತಡವಿಲ್ಲದೆಯೇ ಮಾನವರ ಸೆ
ಗೈಯ್ಯುತ್ತಾರೆ. ಅವರ ಮುಂದೆ ಯಾವುದೇ ಲೌಕಿಕ ಹಿತಾಸಕ್ತಿಯಿರುವುದಿಲ್ಲ. ಹೆಸ
ಗಳಿಸುವುದೂ ಅವರಿಗೆ ಬೇಕಾಗಿಲ್ಲ. ಈ ಉಪಾಯದಿಂದ ಜನರನ್ನು ತಮ್ಮ ಬಳಿ ಸೇ
ಅವರ ಮೇಲೆ ಆಧಿಪತ್ಯ ಸ್ಥಾಪಿಸಲೂ ಅವರು ಬಯಸುವುದಿಲ್ಲ. ಅದರ ಬದ
ಅವರು ಅದನ್ನು ಒಂದು ಕರ್ತವ್ಯವೆಂದು ಬಗೆದು ಮಾಡುತ್ತಾರೆ. ಅವರು ಕೇ
ಅಲ್ಲಾಹನ ಸಂಪ್ರೀತಿ ಬಯಸುವವರಾಗಿದ್ದು ಅವನಿಂದ ಪ್ರತಿಫಲವನ್ನು ನಿರೀಕ್ಷಿಸುತ್ತಾ
ಅವರ ವೈರಿಗಳೂ ಅವರ ಸಭ್ಯ ನಡವಳಿಕೆ, ನೀತಿ-ಚಾರಿತ್ರ್ಯ, ಹಿತಾಕಾಂಕ್ಷೆಯ ಒ
ಸಾಕ್ಷ್ಯ ಹೇಳಲು ನಿರ್ಬಂಧಿತರಾಗುತ್ತಾರೆ. ಇದಕ್ಕೆ ವ್ಯತಿರಿಕ್ತವಾಗಿ ಮಾನವನು ದೆ
ಭಯವನ್ನು ಕೈಬಿಟ್ಟಾಗಲೆಲ್ಲ ತನ್ನಂತಿರುವ ಮಾನವರೊಂದಿಗೆ ಅವನ ವರ್ತನೆ ಕೆಟ್ಟ
ಬಿಡುತ್ತದೆ. ಅವನು ನ್ಯಾಯ-ನೀತಿಯನ್ನು ಬಿಟ್ಟು ಅಕ್ರಮ ಅತ್ಯಾಚಾರಗಳ ಮಾರ್ಗವ
ತುಳಿಯುತ್ತಾನೆ. ಇತರರ ಹಕ್ಕುಗಳನ್ನು ಕಬಳಿಸುತ್ತಾನೆ. ಒಟ್ಟಿನಲ್ಲಿ ನಮ್ಮ ಕ
ಯಲ್ಲಿರುವ ಎಲ್ಲ ಅತಿರೇಕಗಳನ್ನೂ ಮಾಡುತ್ತಾನೆ.[2]

---

2. ಕೆಲವೊಮ್ಮೆ ಸಮಾಜಸೇವೆಗೆ ದೇವನನ್ನು ಮತ್ತು ಧರ್ಮವನ್ನು ನಂಬಬೇಕಾಗಿಲ್ಲ. ಅ
ಹೊರತೂ ಸೇವೆ ಮಾಡಬಹುದೆಂದು ಹೇಳಲಾಗುತ್ತದೆ. ಅದಕ್ಕೆ ಆಧಾರವಾಗಿ, ಪಾಶ್ಚಿಮಾತ್ಯ ದೇಶ
ಇಡೀ ಲೋಕದಲ್ಲಿ ಭಾರೀ ಕಲ್ಯಾಣ ಕಾರ್ಯಗಳನ್ನು ಮಾಡಿವೆಯೆಂದು ತೋರಿಸಲಾಗುತ್ತದೆ. ವಾಸ್ತವ
ಮಾನವ ಪ್ರಕೃತಿಯಲ್ಲೇ ಇತರ ಮಾನವರ ಸೇವೆಗೈಯಬೇಕೆಂಬ ಭಾವನೆಯಿರುತ್ತದೆ. ಇದು ಅ
ಪ್ರಕಟನೆಯೇ ಆಗಿದೆ. ಆದರೆ ಈ ಮನೋಭಾವದೊಂದಿಗೆ ವೈಯಕ್ತಿಕ ಮತ್ತು ದೇಶೀಯ ಹಿತಾಸಕ್ತಿ
ಸಂಘರ್ಷಿಸಿದಾಗ ಇದು ಮಂದಗೊಳ್ಳುತ್ತದೆ. ಮಾನವನು ಇದಕ್ಕೆ ವ್ಯತಿರಿಕ್ತವಾಗಿ ವರ್ತಿಸುತ
ಕಲ್ಯಾಣಕಾರಿ ಕೆಲಸಗಳನ್ನು ಮಾಡುತ್ತದೆಂದು ಹೇಳಲಾಗುವ ಇದೇ ಪಾಶ್ಚಿಮಾತ್ಯ ದೇಶಗಳು ತ
ಸ್ವಾರ್ಥಕ್ಕಾಗಿ ಇತರ ಜನಾಂಗಗಳ ಮೇಲೆ ನಿರ್ಬಂಧ ಹೇರುತ್ತವೆ. ಅವರ ಮೇಲೆ ರಾಜಕೀಯ ಒ
ಸ್ಥಾಪಿಸುತ್ತವೆ. ದಬ್ಬಾಳಿಕೆಯ ಎಲ್ಲ ಅಸ್ತ್ರಗಳನ್ನು ಬಳಸುತ್ತವೆ. ಅವರನ್ನು ನಾಶಗೊಳಿಸಲೂ ಹಿ
ಮುಂದೆ ನೋಡುವುದಿಲ್ಲ. ದೇವವಿಶ್ವಾಸವು ವ್ಯಕ್ತಿಗಳನ್ನೂ ಜನಾಂಗಗಳನ್ನೂ ಇದರಿಂದ ರಕ್ಷಿಸು
ಪ್ರಾಕೃತಿಕವಾದ ಸೇವಾ ಮನೋಭಾವವನ್ನು ಸ್ವಾರ್ಥವು ಆವರಿಸಲು ಬಿಡುವುದಿಲ್ಲ.

## ೇವೆ ಮತ್ತು ಶುದ್ಧ ಮನಸ್ಸು

ಸೇವೆ ಮಾಡಲು ಮಾನವನ ಮನಸ್ಸು ಶುದ್ಧವಾಗಿರಬೇಕಾಗಿದೆ. ಅವನಲ್ಲಿ ಪ್ರೀತಿ ಾತ್ಸಲ್ಯ, ಕರುಣೆ, ತ್ಯಾಗ ಬಲಿದಾನ, ಕ್ಷಮೆ, ಸಹನೆ ಸ್ಥೈರ್ಯ, ಪ್ರಾಮಾಣಿಕತೆ ಮತ್ತು ಸ್ವಾರ್ಥದಂತಹ ನೈತಿಕ ಗುಣಗಳು ಇದ್ದಾಗ ಮಾತ್ರ ಆತ ಸರಿಯಾಗಿ ಸೇವೆ ಮಾಡ ಲ್ಲನು. ದುರಾಸೆ, ಅತಿಯಾಸೆ, ದ್ವೇಷ ಅಸೂಯೆ, ಅಕ್ರಮ ದಬ್ಬಾಳಿಕೆ ಹಾಗೂ ಮೋಸ ಂಚನೆಗಳಂತಹ ದುರ್ಗುಣಗಳಿಂದ ಮುಕ್ತವಾಗಿರಬೇಕು. ಅನ್ಯಥಾ ಸರಿಯಾದ ಸೇವೆ ತೆಯದು. ಒಂದು ವೇಳೆ ಸೇವೆಯಾದರೂ ಅದು ಕಳಂಕ ರಹಿತವಾಗದು. ಇಸ್ಲಾಮ್ ಾನವನನ್ನು ಉನ್ನತ ಸದ್ಗುಣಗಳಿಂದ ಭೂಷಿತಗೊಳಿಸುತ್ತದೆ. ಕೆಟ್ಟ ಗುಣಗಳಿಂದ ್ಷಸುತ್ತದೆ. ಈ ನೈತಿಕ ತರಬೇತಿಗಾಗಿ ಅದರ ಬಳಿ ಉಪದೇಶ, ಬೋಧನೆಗಳು ಹಾಗೂ ೇರಣೆ ನೀಡುವಂತಹ ಒಂದು ಸಮಗ್ರ ವ್ಯವಸ್ಥೆಯಿದೆ. ಅಗತ್ಯ ಕಂಡಾಗ ಅದು ನೂನಿನ ನೆರವನ್ನೂ ಪಡೆಯುತ್ತದೆ.

## ಧಿಕಾರ ಮತ್ತು ಸೇವೆ

ಈ ಲೋಕದಲ್ಲಿ ಮಾನವನಿಗೆ ದೊರಕುವ ಶಕ್ತಿ, ಸಂಪತ್ತು ಮತ್ತು ಅಧಿಕಾರವು ತರ ಮಾನವರನ್ನು ತಮ್ಮ ಗುಲಾಮರನ್ನಾಗಿ ಮಾಡಿ ದಬ್ಬಾಳಿಕೆ ನಡೆಸಲಿಕ್ಕಾಗಿ ಅಲ್ಲ. ನಲಾಗಿ ಇವೆಲ್ಲದರಲ್ಲೂ ಅವನ ಪರೀಕ್ಷೆಯಿದೆ. ಅವನು ಅವುಗಳನ್ನು ಅಲ್ಲಾಹನ ದಾಸರ ತಕ್ಕಾಗಿ ಬಳಸುತ್ತಾನೋ ಇಲ್ಲವೋ, ಅವರ ಹಕ್ಕುಗಳನ್ನು ಗುರುತಿಸುತ್ತಾನೋ ಇಲ್ಲವೋ ಂಬ ಪರೀಕ್ಷೆ. ಈ ಸಾಧನಾನುಕೂಲತೆಗಳು ಎಷ್ಟು ಹೆಚ್ಚಾಗುವುದೋ ಅವನ ಸತ್ವಪರೀಕ್ಷೆಯೂ ಷ್ಟೇ ಕಠಿಣವಾಗಿರುವುದು. ಈ ಕೆಳಗಿನ ಕುರ್‌ಆನ್ ಸೂಕ್ತವು ಅದನ್ನೇ ಸೂಚಿಸುತ್ತದೆ.

ಅವನೇ ನಿಮ್ಮನ್ನು ಭೂಮಿಯ ಪ್ರತಿನಿಧಿಗಳನ್ನಾಗಿ ಮಾಡಿದನು ಮತ್ತು ನಿಮಗೆ ೊಟ್ಟಿರುವುದರಲ್ಲಿ ನಿಮ್ಮನ್ನು ಪರೀಕ್ಷಿಸಲಿಕ್ಕಾಗಿ ನಿಮ್ಮಲ್ಲಿ ಕೆಲವರಿಗೆ ಕೆಲವರಿಗಿಂತ ಉನ್ನತ ನವಿಗಳನ್ನು ನೀಡಿದನು. ನಿಶ್ಚಯವಾಗಿಯೂ ನಿಮ್ಮ ಪ್ರಭು ಶಿಕ್ಷೆ ಕೊಡುವುದರಲ್ಲಿ ಅತಿ ಘ್ರನು ಮತ್ತು ಅತ್ಯಂತ ಕ್ಷಮಾಶೀಲನೂ ಕರುಣಾನಿಧಿಯೂ ಆಗಿರುತ್ತಾನೆ.

(ಪವಿತ್ರ ಕುರ್‌ಆನ್, 6:165)

## ವೆ ಮತ್ತು ಬಲಾತ್ಕಾರ

ಈ ಲೋಕದಲ್ಲಿ ಸೇವೆ ಮಾಡಲಾಗುತ್ತದೆ. ಹಾಗೆಯೇ ಪಡೆಯಲಾಗುತ್ತದೆ. ಸೇವೆ ಡೆಯುವಲ್ಲಿ ಹೆಚ್ಚಿನ ವೇಳೆ ಬಲಾತ್ಕಾರ, ಅತಿರೇಕ ಮತ್ತು ಶೋಷಣೆ ನಡೆಯುತ್ತದೆ. ಕ್ಕುಗಳನ್ನು ಕಬಳಿಸಲಾಗುತ್ತದೆ, ಭಾವನೆಗಳನ್ನು ದಮನಿಸಲಾಗುತ್ತದೆ. ಮಾನವನ ರವವು ಮಣ್ಣು ಮುಕ್ಕುತ್ತದೆ. ಇದು ಮುಂದುವರಿದರೆ ಗುಲಾಮಗಿರಿಯ ಸರಹದ್ದಿಗೆ ುಪುತ್ತದೆ. ಇಸ್ಲಾಮ್ ಎಲ್ಲ ರೀತಿಯ ಅಕ್ರಮ ಅತ್ಯಾಚಾರವನ್ನು ವಿರೋಧಿಸುತ್ತದೆ. ವುಗಳನ್ನು ಅಳಿಸಬಯಸುತ್ತದೆ.

### ಸೇವೆ ಮತ್ತು ಗೌರವ

ಸೇವೆಯಲ್ಲಿ ನಿಸ್ಪೃಹತೆ ಮತ್ತು ಪ್ರೀತಿಯಿದ್ದರೆ ಮತ್ತು ಅದರಲ್ಲಿ ಯಾವುದೇ ನೀ ಉದ್ದೇಶಗಳಿಲ್ಲದಿದ್ದರೆ ಅದು ಸೇವೆ ಮಾಡುವವನಿಗೆ ಗೌರವ ತಂದು ಕೊಡುತ್ತ ಅವನಿಗಾಗಿ ಪ್ರೀತಿ ಮತ್ತು ಗೌರವದ ಭಾವನೆಗಳುಂಟಾಗುತ್ತದೆ. ಅವನ ಘನತೆಯ ಗುರುತಿಸಲಾಗುತ್ತದೆ. ಅವನು ಮನಸ್ಸನ್ನು ಗೆಲ್ಲುತ್ತಾನೆ.

ಪ್ರಾಮಾಣಿಕವಾಗಿ ಸೇವೆ ಮಾಡಿದರೆ ಪರಲೋಕದಲ್ಲಿ ಅವನಿಗೆ ಅಪಾರ ಪು ಸಿಗುವುದರಲ್ಲಿ ಸಂದೇಹವಿಲ್ಲ. ಈ ಪರಿಮಿತ ಲೋಕದಲ್ಲಿ ಅದನ್ನು ಊಹಿಸಲಿಕ್ಕೂ ನಮ ಸಾಧ್ಯವಿಲ್ಲ.

❁❖❁

## ಇಸ್ಲಾಮ್ ಮತ್ತು ಮಾನವ ಸೇ

**ಮಾ**ನವರ ಸೇವೆ ಮತ್ತು ಅವರೊಂದಿಗೆ ಸದ್ವರ್ತನೆಯು ನೈತಿಕತೆಗೆ ಸಂಬಂಧಿ ವಿಷಯವಾಗಿದೆ. ನೈತಿಕತೆಗೆ ಸಂಬಂಧಿಸಿದ ಎಲ್ಲ ತತ್ವ ಸಿದ್ಧಾಂತಗಳಲ್ಲೂ ಇ ಇರುವುದು. ಅದೇ ರೀತಿ ಎಲ್ಲ ಧರ್ಮಗಳೂ ಅದರ ಮಹತ್ವವನ್ನು ಅಂಗೀಕರಿಸಿ ಅವುಗಳ ಗ್ರಂಥಗಳಲ್ಲಿ ಅದಕ್ಕೆ ಸಮರ್ಥನೆ ದೊರೆಯುತ್ತದೆ.

### ಸಮಾಜ ಸೇವೆ: ಪ್ರವಾದಿ ಶಿಕ್ಷಣಗಳಲ್ಲಿ

ಪವಿತ್ರ ಕುರ್‌ಆನಿನಲ್ಲಿ ಅನೇಕ ಕಡೆ ಪ್ರವಾದಿ ಮುಹಮ್ಮದ್(ಸ) ಅವರಿಗಿ ಮುಂಚಿನ ಅನೇಕ ಪ್ರವಾದಿಗಳ ಮತ್ತವರ ಬೋಧನೆಗಳ ಪ್ರಸ್ತಾಪವಿದೆ. ಅವರ ಪ ಪ್ರವಾದಿ ಇಬ್ರಾಹೀಮ್(ಅ) ಹಾಗೂ ಅವರ ಸಂತಾನ ಪರಂಪರೆಯ ಇಸ್ರಾಈ ಪ್ರವಾದಿಗಳ ಪ್ರಸ್ತಾಪವು ವಿವರವಾಗಿ ಬಂದಿದೆ. ಆ ಪ್ರವಾದಿಗಳು ಬನೀ ಇಸ್ರಾಈ ರೊಂದಿಗೆ ಮಾನವರ ಹಕ್ಕುಗಳನ್ನು ಗುರುತಿಸುವ, ಅವರ ಸೇವೆ ಮಾಡುವ ಮ ಅವರೊಂದಿಗೆ ಸದ್ವರ್ತನೆ ತೋರುವ ಕರಾರು ಪಡೆದಿದೆ. ಅದು ಹೀಗಿದೆ;

ನೀವು ಪರಸ್ಪರ ರಕ್ತಪಾತ ಮಾಡಬಾರದೆಂದೂ, ಪರಸ್ಪರರನ್ನು ಗೃಹಬಾಹಿರರನ್ನಾ **ಮಾಡಬಾರದೆಂದೂ ನಾವು ನಿಮ್ಮೊಡನೆ ಬಲವಾದ ಕರಾರನ್ನು ಪಡೆದ ಆ ಸಂದರ್ಭವನ ಸ್ಮರಿಸಿರಿ. ನೀವು ಅದನ್ನು ಒಪ್ಪಿಕೊಂಡಿದ್ದಿರಿ. ಅದಕ್ಕೆ ನೀವೇ ಸಾಕ್ಷಿಗಳಾಗಿರುತ್ತೀರಿ. ಆದ ಈಗ ನೀವೇ ನಿಮ್ಮ ಬಂಧು ಬಳಗದವರ ಕೊಲೆಗೈಯುತ್ತೀರಲ್ಲದೆ ನಿಮ್ಮೊಳಗಿನವರ ಗೃಹಬಾಹಿರರನ್ನಾಗಿ ಮಾಡುತ್ತೀರಿ. ಅವರ ವಿರುದ್ಧ ಅಕ್ರಮ ಗುಂಪುಗಾರಿಕೆ ಮ ಕೊಳ್ಳುತ್ತೀರಿ. ಅವರು ಯುದ್ಧ ಸೆರೆಯಾಳುಗಳಾಗಿ ಬಂದಾಗ ಅವರ ವಿಮೋಚನೆಗ 'ವಿಮೋಚನಾ ಮೌಲ್ಯ' ಪಡೆದೇ ಅವರನ್ನು ಬಿಡುತ್ತೀರಿ. ವಸ್ತುತಃ ಅವರನ್ನು ಗ**

ರರನ್ನಾಗಿ ಮಾಡುವುದನ್ನೇ ನಿಮಗೆ ನಿಷೇಧಿಸಲಾಗಿತ್ತು. ನೀವೇನು ಗ್ರಂಥದ ಒಂದಂಶದ
ಲೆ ವಿಶ್ವಾಸವಿಟ್ಟು ಇನ್ನೊಂದಂಶವನ್ನು ನಿಷೇಧಿಸುತ್ತೀರಾ? ನಿಮ್ಮ ಪೈಕಿ ಹೀಗೆ ಮಾಡು
ರ ಶಿಕ್ಷೆಯು ಇಹದಲ್ಲಿ ಅವಮಾನಿತ ಜೀವನವೂ ಪರದಲ್ಲಿ ಘೋರ ಯಾತನೆಯ
ಗೆ ತಳ್ಳಲ್ಪಡುವುದೂ ಆಗಿರಬೇಕಲ್ಲದೆ ಇನ್ನೇನು? ನೀವು ಮಾಡುವುದರ ಬಗ್ಗೆ
ಹನು ಅಶ್ರದ್ಧನಲ್ಲ. (ಪವಿತ್ರ ಕುರ್‌ಆನ್, 2:84-85)

ಈ ಸೂಕ್ತಗಳ ಪ್ರಕಾರ, ಬನೀ ಇಸ್ರಾಈಲರೊಂದಿಗೆ ಏಕ ಅಲ್ಲಾಹನ ಆರಾಧನೆ
ತ್ತು ಮಾನವರೊಂದಿಗೆ ಉತ್ತಮವಾಗಿ ವರ್ತಿಸುವ ಕರಾರು ಪಡೆಯಲಾಗಿತ್ತು. ಜೊತೆಗೆ
ಮ ಅತ್ಯಾಚಾರದಿಂದ ದೂರವಿರುವ ಕರಾರನ್ನೂ ಪಡೆಯಲಾಗಿತ್ತು. ಸದ್ವರ್ತನೆಗೂ
ಮ ಅತ್ಯಾಚಾರಗಳಿಗೂ ದೂರದ ಸಂಬಂಧವೂ ಇಲ್ಲ. ಮಾನವ ಸೇವೆಯ ಪವಿತ್ರ
ನೆ ಹಾಗೂ ನಿಷ್ಕರುಣೆ ಮತ್ತು ಕ್ರೂರತನ ಎಂದೂ ಒಟ್ಟು ಸೇರದು. ಇನ್ನೊಬ್ಬರ
ಹರಿಸುತ್ತಾ ಇರುವವನು ಅವರ ಗಾಯಕ್ಕೆ ಮುಲಾಮು ಹಚ್ಚಲಾರನು. ಅದೇ ರೀತಿ
ಮಾಡುವ ಕೈಗಳು ಅಕ್ರಮ ದೌರ್ಜನ್ಯಗಳಿಗೆ ಏಳದು. ಈ ವಿವಿಧ ಪಾತ್ರಗಳು ವಿವಿಧ
ನೆಗಳೊಂದಿಗೆ ರೂಪ ತಾಳುತ್ತವೆ. ಸೇವೆಯಿಂದಾಗಿ ಜನಾಂಗಗಳು ಜೀವ ಪಡೆಯುತ್ತವೆ.
ಮದಿಂದ ದೊಡ್ಡದೊಡ್ಡ ಶಕ್ತಿಶಾಲಿ, ಧಿಕ್ಕಾರಿ ಜನಾಂಗಗಳನ್ನು ಯಾವ ರೀತಿ ನಾಶಪಡಿಸ
ುತೆಂದರೆ ಅನಂತರ ಅವರಿಗೆ ತಲೆಯೆತ್ತಲೂ ಸಾಧ್ಯವಾಗಲಿಲ್ಲ. ಬನೀ ಇಸ್ರಾಈಲರು
ಂತಿಕೆ ನೀಡುವ ಕರಾರನ್ನು ಮುರಿದರು. ಅದನ್ನು ನಿರ್ಲಕ್ಷಿಸಿದರು ಎಂದು ಕುರ್‌ಆನ್
ುತ್ತದೆ. ಅವರು ದೇವಗ್ರಂಥದ ಕೆಲವಂಶವನ್ನು ಪಾಲಿಸಿದರು. ಇನ್ನು ಕೆಲವಂಶವನ್ನು
ಣಿಸಿದರು. ತಮ್ಮದೇ ಜನಾಂಗದವರನ್ನು ಕೊಂದರು. ಅವರನ್ನು ಮನೆಮಾರುಗಳಿಂದ
ದರು. ಈ ಉದ್ದೇಶಾರ್ಥ ಅವರು ವೈರಿಗಳೊಂದಿಗೆ ಮೈತ್ರಿ ಮಾಡಿಕೊಂಡರು.
ಗೆ ಸಹಾಯ ಮಾಡಿದರು. ಇದರಿಂದ ಅವರ ಬಲವೆಲ್ಲ ಮುರಿಯಿತು. ಐಕ್ಯ
ಗೊಂಡಿತು. ಅವರಿಗೆ ಇಹಲೋಕದಲ್ಲೂ ನಿಂದ್ಯತೆ, ಅಪಮಾನ ಎದುರಿಸಬೇಕಾಯಿತು.
ಲೋಕದ ಉಗ್ರ ಶಿಕ್ಷೆಗೂ ಅವರು ಗುರಿಯಾಗುವರು.

(ಪವಿತ್ರ ಕುರ್‌ಆನ್, 2:85)

## ‌ಆನ್ ಮತ್ತು ಸಮಾಜ ಸೇವೆ

ಪವಿತ್ರ ಕುರ್‌ಆನ್‌ನಲ್ಲಿ ದೇವನ ವಿಶಿಷ್ಟ ದಾಸರ ಶಿಕ್ಷಣಗಳು ತುಂಬಿಕೊಂಡಿವೆ.
ಅವತೀರ್ಣದ ಆರಂಭದಲ್ಲಿ ಮೂಲಭೂತ ವಿಶ್ವಾಸಗಳ ನಂತರ, ಮಾನವನು
ನೊಂದಿಗೆ ಸಂಬಂಧವನ್ನು ಬಲಿಷ್ಠಗೊಳಿಸಬೇಕು, ಕೇವಲ ಆತನನ್ನು ಆರಾಧಿಸಬೇಕು,
ರ ಮುಂದೆ ತಲೆಬಾಗಬಾರದು ಎಂದು ಒತ್ತು ಕೊಟ್ಟು ಹೇಳಿದೆ. ಎರಡನೆಯದಾಗಿ
ವರೊಂದಿಗೆ ಉತ್ತಮವಾಗಿ ವರ್ತಿಸಬೇಕು. ಹಕ್ಕುದಾರರಿಗೆ ಅವರ ಹಕ್ಕನ್ನು ನೀಡಬೇಕು,
ತಾಯಿಯರೊಂದಿಗೆ ಅತ್ಯುತ್ತಮವಾಗಿ ನಡೆದುಕೊಳ್ಳಬೇಕು. ಆಪ್ತೇಷ್ಟರು,
ೂರೆಯುವರು, ಅನಾಥರು, ಬಡವರು ಮತ್ತು ಅಪೇಕ್ಷಿತರಿಗೆ ನೆರವಾಗಬೇಕು ಎಂದು

ಸಾರಿದೆ. ಸೇವೆಗೆ ಅರ್ಹರಾಗಿರುವವರಿಗೆ ಸಹಾಯ ಮಾಡಲು ಸಾಧ್ಯವಾದರೆ ಅ
ಹಿಂಜರಿಯಬಾರದು. ಅವನು ಬಲಶಾಲಿಯಾದರೆ ದುರ್ಬಲರ ಮೇಲೆ ಕೈಯೆತ್ತಬಾರ
ಬದಲಾಗಿ ಅವರಿಗೆ ನೆರವಾಗಬೇಕು. ಜನರ ಜೀವ-ಸೊತ್ತು, ಮಾನ ಮರ್ಯಾದೆಗಳ
ಕಾಪಾಡಬೇಕು. ಯಾರನ್ನೂ ಮೋಸಗೊಳಿಸಬಾರದು, ವಂಚಿಸಬಾರದು. ಯಾವಾಗ
ನ್ಯಾಯ-ನೀತಿ ಹಾಗೂ ವಿಶ್ವಾಸ ನಂಬಿಕೆಯನ್ನು ಕಾಪಾಡಬೇಕು. ಅವನು ಸಮಾಜಕ್ಕೆ ಕಂ
ವಾಗಿರದೆ ಬೇಕಾಗುವವನಾಗಿರಬೇಕು. ಅವನಿಂದ ಯಾರಿಗೂ ನಷ್ಟವುಂಟಾಗಬಾರ
ಲಾಭವಾಗಬೇಕು. ಈ ವಿಷಯಗಳನ್ನು ಕುರ್‌ಆನ್ ಪದೇಪದೇ ಆವರ್ತಿಸಿ, ಕೆಲ
ಸಂಕ್ಷಿಪ್ತವಾಗಿಯೂ ಇನ್ನು ಕೆಲವೆಡೆ ವಿವರವಾಗಿ ಪ್ರಸ್ತಾಪಿಸುವ ಮೂಲಕವೂ ಅ
ಮಹತ್ವವನ್ನು ಹೆಚ್ಚಿಸಿದೆ. ಬನೀ ಇಸ್ರಾಈಲ್ ಅಧ್ಯಾಯದ 3 ಮತ್ತು 4ನೆಯ ರುಕೂಲ್
ಇದರ ಅತ್ಯುತ್ತಮ ಉದಾಹರಣೆ ನಮಗೆ ಸಿಗುತ್ತದೆ.[1]

"ನಿಮ್ಮ ಪ್ರಭು (ಹೀಗೆ) ವಿಧಿಸಿ ಬಿಟ್ಟಿದ್ದಾನೆ; ನೀವು ಕೇವಲ ಅವನೊಬ್ಬನ ಹೊ
ಇನ್ನಾರ ದಾಸ್ಯ-ಆರಾಧನೆಯನ್ನೂ ಮಾಡಬಾರದು. ಮಾತಾಪಿತರೊಡನೆ ಸೌಜನ್ಯದಿ
ವರ್ತಿಸಿರಿ. ಅವರ ಪೈಕಿ ಒಬ್ಬರು ಅಥವಾ ಅವರಿಬ್ಬರೂ ವೃದ್ಧರಾಗಿ ನಿಮ್ಮ ಬಳಿಯಲ್ಲಿ
ಅವರ ಬಗ್ಗೆ ಚಕಾರವೆತ್ತಬೇಡಿರಿ ಮತ್ತು ಅವರನ್ನು ಜರೆಯಬೇಡಿರಿ. ಅವರೊ
ಗೌರವಪೂರ್ವಕವಾಗಿ ಮಾತನಾಡಿರಿ. ನಯ ವಿನಯ ಮತ್ತು ಕರುಣೆಯೊಂದಿಗೆ
ಮುಂದೆ ಬಾಗಿಕೊಂಡಿರಿ. "ಓ ನನ್ನ ಪ್ರಭೂ! ಇವರು ನನ್ನ ಚಿಕ್ಕಂದಿನಲ್ಲಿ ದಯಾ ವಾ
ಗಳಿಂದ ನನ್ನನ್ನು ಸಾಕಿದಂತೆಯೇ ನೀನು ಅವರ ಮೇಲೆ ಕೃಪೆತೋರು" ಎಂದು ಪ್ರಾರ್ಥಿ
ನಿಮ್ಮ ಅಂತರಂಗದಲ್ಲಿ ಏನಿದೆಯೆಂಬುದನ್ನು ನಿಮ್ಮ ಪ್ರಭು ಚೆನ್ನಾಗಿ ಬಲ್ಲನು.
ಸಜ್ಜನರಾಗಿ ಬಾಳಿಕೊಂಡಿದ್ದರೆ ತಮ್ಮ ಅಪರಾಧಗಳ ಬಗ್ಗೆ ಜಾಗೃತರಾಗಿ ದಾಸ್ಯ-ಆರಾಧ
ಕಡೆಗೆ ಮರಳಿ ಬರುವಂತಹ ಸರ್ವರನ್ನೂ ಅವನು ಕ್ಷಮಿಸುವವನಾಗಿರುತ್ತಾನೆ. ಸಂಬಂಧಿ
ಅವನ ಹಕ್ಕನ್ನೂ, ದರಿದ್ರನಿಗೂ, ಪ್ರಯಾಣಿಕನಿಗೂ ಅವನವನ ಹಕ್ಕನ್ನೂ ಕೊಡಿರಿ. ದುಂದು
ಮಾಡಬೇಡಿರಿ. ದುಂದುಗಾರರು ಶೈತಾನನ ಸೋದರರಾಗಿರುತ್ತಾರೆ ಮತ್ತು ಶೈತಾನನು
ಪ್ರಭುವಿಗೆ ಕೃತಘ್ನನು. ನೀವು ನಿರೀಕ್ಷಿಸುತ್ತಿರುವ ಅಲ್ಲಾಹನ ಕೃಪೆಯನ್ನು ಇನ್ನೂ ಅರ
ರುವ ಕಾರಣ ನಿಮಗೆ ಅವರಿಂದ (ನಿರ್ಗತಿಕರಾದ ಸಂಬಂಧಿಕರಿಂದ, ದರಿದ್ರರಿಂದ ಪ
ಪ್ರಯಾಣಿಕರಿಂದ) ತಪ್ಪಿಸಿಕೊಳ್ಳಬೇಕೆಂದಾದರೆ, ಅವರಿಗೆ ನಯವಾಗಿ ಉತ್ತರಕೊಡಿರಿ.
ಕೈಯನ್ನು ಕೊರಳಿಗೆ ಕಟ್ಟಿಕೊಂಡಿರಲೂ ಬೇಡಿರಿ ಮತ್ತು ನಿಂದ್ಯರೂ ನಿಸ್ಸಹಾಯಕರೂ
ಬಿಡುವಂತೆ ಅದನ್ನು ಸಂಪೂರ್ಣವಾಗಿ ತೆರೆದಿಟ್ಟು ಬಿಡಲೂ ಬೇಡಿರಿ. ನಿನ್ನ ಪ್ರಭು ತ
ಬಂದವರಿಗೆ ಜೀವನಾಧಾರವನ್ನು ವಿಶಾಲಗೊಳಿಸುತ್ತಾನೆ ಮತ್ತು ತನಗಿಷ್ಟ ಬಂದ
ಸಂಕುಚಿತ ಗೊಳಿಸುತ್ತಾನೆ. ಅವನು ತನ್ನ ದಾಸರ ಸ್ಥಿತಿ-ಗತಿಗಳನ್ನು ಅರಿತವನಾಗಿರು

1. ಬನೀ ಇಸ್ರಾಈಲ್ ಅಧ್ಯಾಯದ 23-28 ಅಲ್‌ಅನ್‌ಆಮ್ ಅಧ್ಯಾಯದಲ್ಲೂ ಇದೇ
ಸಂಕ್ಷಿಪ್ತವಾಗಿ ವಿವರಿಸಲಾಗಿದೆ. ಇದರಲ್ಲಿ ಒಂದೊಂದು ವಿಷಯದ ಕುರಿತೂ ಕುರ್‌ಆನಿನಲ್ಲಿ ವಿ
ಒತ್ತು ಕೊಡಲಾಗಿದೆ.

ತ್ತು ಅವರನ್ನು ವೀಕ್ಷಿಸುತ್ತಿದ್ದಾನೆ. ನಿಮ್ಮ ಮಕ್ಕಳನ್ನು ಬಡತನದ ಭೀತಿಯಿಂದ ಕೊಲ್ಲ
ಡಿರಿ. ನಾವು ಅವರಿಗೂ ಆಹಾರ ನೀಡುವೆವು, ನಿಮಗೂ ನೀಡುವೆವು. ವಾಸ್ತವದಲ್ಲಿ ಅವರ
ಯು ಒಂದು ಘೋರ ಅಪರಾಧವಾಗಿದೆ. ವ್ಯಭಿಚಾರದ ಹತ್ತಿರವೂ ಸುಳಿಯಬೇಡಿರಿ.
ಏ ಅತಿ ಹೀನ ಕಾರ್ಯ ಮತ್ತು ಅತ್ಯಂತ ಕೆಟ್ಟ ಮಾರ್ಗ. ಅಲ್ಲಾಹನು ಸನ್ಮಾನಿಸಿರುವ
ವವನ್ನು ನ್ಯಾಯದಿಂದಲ್ಲದೆ ಹರಣ ಮಾಡಬೇಡಿರಿ. ಅಕ್ರಮವಾಗಿ ವಧಿಸಲ್ಪಟ್ಟವನ
ರೀಸುದಾರನಿಗೆ ಪ್ರತೀಕಾರ ಪಡೆಯುವ ಹಕ್ಕನ್ನು ನಾವು ನೀಡಿರುತ್ತೇವೆ. ಆದುದರಿಂದ
ನು ವಧೆಯಲ್ಲಿ ಹದಮೀರಬಾರದು. ನಿಶ್ಚಯವಾಗಿಯೂ ಅವನಿಗೆ ಸಹಾಯ
ಡಲಾಗುವುದು. ಅನಾಥನ ಸೊತ್ತನ್ನು ಉತ್ತಮ ರೀತಿಯಿಂದಲ್ಲದೆ ಸಮೀಪಿಸಬಾರದು-
ನು) ಅವನು ಯೌವನಾವಸ್ಥೆಗೆ ತಲಪುವ ತನಕ. ವಚನವನ್ನು ಪಾಲಿಸಿರಿ. ನಿಶ್ಚಯ
ಗಿಯೂ ವಚನದ ಕುರಿತು- ನಿಮ್ಮನ್ನು ಪ್ರಶ್ನಿಸಲಾಗುವುದು. ಅಳತೆ ಮಾಡಿ ಕೊಡುವಾಗ
ರ್ಣ ತುಂಬಿಸಿ ಕೊಡಿರಿ. ತೂಗುವಾಗ ಸರಿಯಾದ ತಕ್ಕಡಿಯಲ್ಲಿ ತೂಗಿರಿ. ಇದು ಒಳ್ಳೆಯ
ಏ ಮತ್ತು ಪರಿಣಾಮದ ದೃಷ್ಟಿಯಿಂದಲೂ ಇದುವೇ ಉತ್ತಮ. ನಿಮಗೆ ಜ್ಞಾನವಿಲ್ಲ
ತಹ ವಸ್ತುಗಳನ್ನು ಬೆಂಬತ್ತಬೇಡಿರಿ. ನಿಶ್ಚಯವಾಗಿಯೂ ಶ್ರವಣ, ದೃಷ್ಟಿ ಮತ್ತು
ನಸ್ಸು ಇವೆಲ್ಲವುಗಳ ವಿಚಾರಣೆ ನಡೆಯಲಿದೆ. ಭೂಮಿಯ ಮೇಲೆ ದರ್ಪದಿಂದ ನಡೆಯ
ಡಿರಿ. ನೀವು ಭೂಮಿಯನ್ನು ಸೀಳಲಾರಿರಿ ಮತ್ತು ಪರ್ವತಗಳ ಶಿಖರಕ್ಕೂ ತಲಪಲಾರಿರಿ.
ವಿಷಯದಲ್ಲಿ ಪ್ರತಿಯೊಂದು ದೋಷ ಭಾಗವು ನಿಮ್ಮ ಪ್ರಭುವಿನ ಬಳಿ
ಯವಾಗಿರುತ್ತದೆ." (ಪವಿತ್ರ ಕುರ್‌ಆನ್, 17:23-38)

ಸಮಾಜ ಸೇವೆಯ ಕುರಿತು ಕುರ್‌ಆನ್-ಹದೀಸ್‌ಗಳಲ್ಲಿ ಅನೇಕ ಮಗ್ಗುಲುಗಳಿಂದ
ನ ಸೆಳೆದು ಅದಕ್ಕೆ ಒತ್ತು ಕೊಡಲಾಗಿದೆ.

## ವಾನುಗ್ರಹ

ಈ ಲೋಕದಲ್ಲಿ ಕೆಲವರಿಗೆ ಎಲ್ಲ ರೀತಿಯ ಸೌಕರ್ಯ-ಸೌಲಭ್ಯಗಳೂ ಲಭ್ಯವಾದರೆ
್ನ ಕೆಲವರು ಇದರಿಂದ ವಂಚಿತರಾಗಿದ್ದಾರೆ. ಉಳ್ಳವರು ಇಲ್ಲದವರ ಸೇವೆ ಮಾಡಬೇಕು.
ರಿಗೆ ಸಕಲ ಸೌಕರ್ಯಗಳನ್ನೂ ಒದಗಿಸಿ ಅವರ ಬದುಕನ್ನು ಹಸನುಗೊಳಿಸಬೇಕೆಂಬುದು
್‌ಆನಿನ ಬೇಡಿಕೆಯಾಗಿದೆ. ಅಲ್ಲಾಹನು ಕಣ್ಣು, ಕಿವಿ, ನಾಲಗೆ ಹಾಗೂ ದುಡಿಯುವ
ಲುಗಳು, ಆಲೋಚಿಸುವ ಮನಮಸ್ತಿಷ್ಕಗಳು ಹಾಗೂ ಜೀವನದ ಸುಖ ಸಾಧನಗಳನ್ನು
ತಲ್ಪಟ್ಟ ಮಾನವನು, ಜೀವನ ಸಾಧನಗಳಿಲ್ಲದೆ ಹಾಗೂ ದುಡಿಯುವ ಸಾಮರ್ಥ್ಯವಿಲ್ಲ
ರನ್ನು ಭಿಕ್ಷೆ ಬೇಡಲು ಅಥವಾ ಆತ್ಮಹತ್ಯೆ ಮಾಡಲು ನಿರ್ಬಂಧಿಸುವಂತಹ ಅಸಹಾಯಕ
ಯಲ್ಲಿ ಬಿಡದೆ ಅವನ ಜೀವನ ಸೌಕರ್ಯದ ಸಾಧನಗಳನ್ನು ಒದಗಿಸಿಕೊಡಬೇಕಾದುದು
ನ ಕರ್ತವ್ಯವಾಗಿದೆ. ಏಕೆಂದರೆ ಅವನಿಗೆ ಒದಗಿರುವ ಸಾಧನಗಳೆಲ್ಲ ದೇವನಿಂದ
ರೆತಿರುವುದರಿಂದ ಅವನಿಗೆ ಕೃತಜ್ಞತೆ ಸಲ್ಲಿಸಬೇಕಾಗಿದೆ. ಕೃತಜ್ಞತೆ ಸಲ್ಲಿಸುವ ಒಂದು
ನವು ಅವನ ದಾಸರೊಂದಿಗೆ ಉತ್ತಮವಾಗಿ ವರ್ತಿಸುವುದು ಮತ್ತು ಅವಶ್ಯಾರ್ಥಿಗಳ

ಸೇವೆ ಮಾಡುವುದಾಗಿದೆ. ದೇವನು ನೀಡಿದ ಎಲ್ಲ ಅನುಗ್ರಹಗಳಲ್ಲಿ ಅವನ ದ
ಪಾಲಿದೆ. ಅದನ್ನು ಪೂರೈಸದೆ ಅವನಿಗೆ ಕೃತಜ್ಞತೆ ಅರ್ಪಿಸುವುದು ಸಾಧ್ಯವಿಲ್ಲ. ಒಬ್ಬ
ದೇವನ ಅನುಗ್ರಹಗಳು ಲಭಿಸಿದ ನಂತರ ಅವನಲ್ಲಿ ಸೃಷ್ಟಿಸೇವೆಯ ಮನೋಭಾ
ಉಂಟಾಗದಿದ್ದರೆ ಅವನಿಗೆ ದೇವಾನುಗ್ರಹಗಳ ಬಗ್ಗೆ ಪ್ರಜ್ಞೆಯೇ ಇಲ್ಲವೆಂದ
ಕುರ್‌ಆನ್ ಈ ಮನೋಭಾವವನ್ನು ಖಂಡಿಸುತ್ತದೆ. ಅದರ ಕೆಟ್ಟ ಪರಿಣಾಮದ
ಎಚ್ಚರಿಸುತ್ತದೆ. ಒಂದೆಡೆ ಹೀಗೆ ಹೇಳಲಾಗಿದೆ.

**"ನಾವು ಅವನಿಗೆ ಎರಡು ಕಣ್ಣುಗಳನ್ನೂ ಒಂದು ನಾಲಗೆಯನ್ನೂ ಎರಡು ತುಟಿಗಳ ಕೊಟ್ಟಿಲ್ಲವೇ? ಮತ್ತು ಅವನಿಗೆ ಎರಡು ಸುಸ್ಪಷ್ಟ ದಾರಿಗಳನ್ನು ತೋರಿಸಿ ಕೊಡಲಿಲ್ಲ ಆದರೆ ಅವನು ದುರ್ಗಮ ಏರನ್ನು ಏರುವ ಸಾಹಸವನ್ನೇ ಮಾಡಲಿಲ್ಲ. ಆ ದುರ್ಗಮ ಏನೆಂದು ನಿಮಗೇನು ಗೊತ್ತು? ಯಾವುದಾದರೂ ಕೊರಳನ್ನು ದಾಸ್ಯ ಬಂಧನದಿ ವಿಮೋಚಿಸುವುದು- ಅಥವಾ ಹಸಿವಿನ ದಿನ, ಹಸಿದ ಆಪ್ತ ಅನಾಥನಿಗೆ ಅಥವಾ ದೀ ದರಿದ್ರನಿಗೆ ಉಣಬಡಿಸುವುದು. ತರುವಾಯ, ಸತ್ಯವಿಶ್ವಾಸವಿರಿಸಿದ ಹಾಗೂ ಪರಸ್ಪ ಸಹನೆ ಮತ್ತು (ಸೃಷ್ಟಿಗಳ ಮೇಲೆ) ಕರುಣೆಯನ್ನು ಬೋಧಿಸಿದ ಜನರ ಸಾಲಿಗೆ ಸೇರುವು ಇವರೇ ಬಲಗಡೆಯವರು. ಮತ್ತು ನಮ್ಮ ಸೂಕ್ತಗಳನ್ನು ತಿರಸ್ಕರಿಸಿದವರು ಎಡಗಡೆಯ ಅವರ ಮೇಲೆ ನರಕಾಗ್ನಿಯು ಆವರಿಸಿಕೊಂಡಿರುವುದು." (ಪವಿತ್ರ ಕುರ್‌ಆನ್, 90:8-**

ಅಲ್ಲಾಹನು ಮಾನವನ ಮೇಲೆ ಅಗಣಿತ ಉಪಕಾರಗಳನ್ನು ಮಾಡಿದ್ದಾನೆ. ಪ್ರ
ಸೂಕ್ತಗಳಲ್ಲಿ ಕೆಲವು ಉಪಕಾರಗಳನ್ನು ಪ್ರಸ್ತಾಪಿಸಲಾಗಿದೆ. ಮಾನವನು ಒಂದು ದುರ್ಗ
ಏರನ್ನು ಏರಬೇಕೆಂಬ ಉದ್ದೇಶದಿಂದ ಅಲ್ಲಾಹನು ಮಾನವನಿಗೆ ಕಣ್ಣು, ಕಿವಿ, ನ
ಮಸ್ತಿಷ್ಕಗಳಂತಹ ಶಕ್ತಿಗಳನ್ನು ದಯಪಾಲಿಸಿದ್ದಾನೆಂದು ಹೇಳಲಾಗಿದೆ. ಇದು ಗುಲಾಮ
ವಿಮೋಚಿಸುವುದು, ಅನಾಥರು ಮತ್ತು ಬಡವರಿಗೆ ಸಹಾಯ ಮಾಡುವುದೇ ಆ
ಅದರೊಂದಿಗೆ ಈ ದುರ್ಗಮ ಏರನ್ನು ಏರುತ್ತಲಿರುವ ವಿಶ್ವಾಸಿಗಳ ಕೂಟದಲ್ಲಿ ಆತ ಸೆ
ಬೇಕಾಗಿದೆ. ಅವರು ಮರ್ದಿತರು,'ದೀನರು, ಹಸಿದವರೊಂದಿಗೆ ಪ್ರೀತಿ ಮತ್ತು ಸಹಾನುಭ
ಹೊಂದಿದವರಾಗಿದ್ದು ಅದನ್ನೇ ಇತರರಿಗೂ ಬೋಧಿಸುತ್ತಾರೆ. ಇದು ಸ್ವರ್ಗದ
ಯಾಗಿದೆ. ಅದನ್ನು ವಿರೋಧಿಸುತ್ತಿರುವವರು ನರಕದತ್ತ ಸಾಗುತ್ತಿದ್ದಾರೆ. ನಿರ್ಣಾ
ದಿನದಂದು ಅಲ್ಲಿಗೇ ತಲುಪುವರು. ಅನಂತರ ಅದನ್ನು ಮುಚ್ಚಿ ಬಿಡಲಾಗುವ
ಅದರಿಂದ ಅವರು ಎಂದೂ ಹೊರಬರಲು ಸಾಧ್ಯವಿಲ್ಲ.

## ಜನಸೇವೆಯೇ ದೇವನ ಸೇವೆಯಾಗಿದೆ

ಇಸ್ಲಾಮ್ ಜನಸೇವೆಯನ್ನು ಸೃಷ್ಟಿಕರ್ತನ ಸೇವೆಯೆಂದು ಸಾರುತ್ತದೆ. ದೆ
ದಾಸರಿಗೆ ನೆರವಾಗುವುದು ದೇವನಿಗೆ ನೆರವಾದಂತೆ. ಅವರಿಗೆ ಸಹಾಯವೊದಗಿಸು
ದೇವನಿಗೆ ಸಹಾಯ ಒದಗಿಸಿದಂತೆಯೆಂದು ಅದು ಹೇಳುತ್ತದೆ. ದೇವನ ದಾಸನೊ
ನಿಮ್ಮ ಮುಂದೆ ಸಹಾಯಕ್ಕೆ ಕೈ ಚಾಚಿದಾಗ ನೀವು ಅವನನ್ನು ಬರಿಗೈಯಲ್ಲಿ ಹಿಂಪೆ ಕಳಿ

ವನ ಕೈಯನ್ನು ಮರಳಿಸಿದಂತೆ, ರೋಗಿಯೊಬ್ಬನಿಗೆ ನಿಮ್ಮ ಸಹಾಯದ ಅಗತ್ಯವಿದ್ದಾಗ ವೃ ಸಹಾಯ ಮಾಡಲು ನಿರಾಕರಿಸಿದರೆ ದೇವನಿಗೆ ಸಹಾಯವನ್ನು ನಿರಾಕರಿಸಿದಂತೆ. ವನನ್ನು ಸಂತುಷ್ಟಗೊಳಿಸಬೇಕಾದರೆ ಅವನ ದಾಸರನ್ನು ಸಂತುಷ್ಟಗೊಳಿಸಬೇಕಾದೀತು. ರಿಗೆ ಸುಖ ಸಂತೋಷ ಒದಗಿಸಬೇಕಾದೀತು. ಭೂಮಿಯಲ್ಲಿರುವವರ ಮೇಲೆ ಕರುಣೆ ೕರಿದರೆ ಆಕಾಶದಲ್ಲಿರುವವನೂ ತನ್ನ ಕರುಣೆಯನ್ನು ಸುರಿಸುವನು. ಒಂದು ಹದೀಸಿನಲ್ಲಿ ನ್ನು ಸ್ಪಷ್ಟವಾಗಿ ವಿವರಿಸಲಾಗಿದೆ.

ಪ್ರವಾದಿ(ಸ) ಹೇಳಿದರು. ನಿರ್ಣಾಯಕ ದಿನದಂದು ಅಲ್ಲಾಹನು ಮಾನವನೊಂದಿಗೆ ಳುವನು- ಓ ಆದಮನ ಪುತ್ರನೇ! ನಾನು ರೋಗಿಯಾಗಿದ್ದೆ. ನೀನು ನನ್ನನ್ನು ದರ್ಶಿಸಲಿಲ್ಲ. ಆಗ ಮಾನವನು ವಿಸ್ಮಯದಿಂದ, ನನ್ನ ಪ್ರಭೂ! ನೀನಂತೂ ಸರ್ವ ೕಕಗಳ ಪಾಲಕನಾಗಿರುವೆ. ನೀನು ರೋಗಿಯಾಗುವುದು ಹೇಗೆ? ನಾನೆಂತು ನಿನ್ನನ್ನು ದರ್ಶಿಸಲಿ ಎಂದು ಕೇಳುವನು. ಅಲ್ಲಾಹನು ಹೇಳುವನು- ನಿನಗೆ ತಿಳಿದಿಲ್ಲವೇ? ನನ್ನ ತಿಂತಹ ಓರ್ವ ದಾಸ ರೋಗಿಯಾಗಿದ್ದ. ನೀನು ಅವನ ಸಂದರ್ಶನಕ್ಕೆ ಹೋಗಲಿಲ್ಲ. ಿ ಹೋಗಿದ್ದರೆ ಅಲ್ಲಿ ನನ್ನನ್ನು ಕಾಣುತ್ತಿದ್ದೆ. ತರುವಾಯ ಅಲ್ಲಾಹನು ಕೇಳುವನು- ಮನ ಪುತ್ರನೇ! ನಾನು ನಿನ್ನಿಂದ ಊಟ ಕೇಳಿದೆ. ನೀನು ನನಗೆ ಉಣಿಸಲಿಲ್ಲ. ನವನು ಹೇಳುವನು- ಸರ್ವ ಲೋಕಗಳ ಪರಿಪಾಲಕನೇ! ನಿನಗೆ ಉಣಿಸಲು ನೀನು ದಿರುವುದು ಯಾವಾಗ? ಅಲ್ಲಾಹನು ಹೇಳುವನು- ನನ್ನ ಓರ್ವ ದಾಸ ನಿನ್ನಿಂದ ಆಹಾರ ದ್ದು ನಿನಗೆ ನೆನಪಿಲ್ಲವೇ? ನೀನು ಅವನಿಗೆ ಊಟ ಕೊಡಲಿಲ್ಲ. ಅಂದು ಅವನ ತಿಕೆಯನ್ನು ಪೂರೈಸುತ್ತಿದ್ದರೆ ಅದರ ಪುಣ್ಯವನ್ನು ನೀನು ಇಲ್ಲಿ ಪಡೆಯುತ್ತಿದ್ದೆ. ಲ್ಲಾಹನು ಪುನಃ ಹೇಳುವನು- ಆದಮನ ಪುತ್ರನೇ! ನಾನು ನಿನ್ನಲ್ಲಿ ನೀರು ಕೇಳಿದೆ. ನೀನು ಿ ಕುಡಿಸಲಿಲ್ಲ. ಮಾನವನು ಹೇಳಿದನು ಉಭಯ ಲೋಕಗಳ ಪ್ರಭುವೇ! ನಾನು ನಿನಗೆ ು ಕುಡಿಸುವುದೇ? ನಿನಗೆ ಬಾಯಾರಿಕೆಯಾಗುತ್ತದೆಯೇ? ಅಲ್ಲಾಹನು ಹೇಳುವನು- ್ನೋರ್ವ ದಾಸನು ನಿನ್ನಲ್ಲಿ ನೀರು ಕೇಳಿದ್ದ. ಆದರೆ ನೀನು ಅವನ ಬಾಯಾರಿಕೆಯನ್ನು ಸಲಿಲ್ಲ ಹಾಗೆ ಮಾಡುತ್ತಿದ್ದರೆ ಅದರ ಪುಣ್ಯವನ್ನು ನೀನು ಇಲ್ಲಿ ಪಡೆಯುತ್ತಿದ್ದೆ.

(ಮುಸ್ಲಿಮ್)

ಸೃಷ್ಟಿ ಸೇವೆಯು ಸೃಷ್ಟಿಕರ್ತನ ಸೇವೆಯಾಗಿದೆ. ಅದರಿಂದ ವಿಮುಖನಾಗುವುದು. ಕರ್ತನ ಸೇವೆಯಿಂದ ಮುಖ ತಿರುಗಿಸುವುದಕ್ಕೆ ಸಮ ಎಂಬ ಅಂಶ ಇದರಿಂದ ವಾಗುತ್ತದೆ.

## ಅವಸ್ಥೆಯಲ್ಲೂ ಸೇವಾ ಮನೋಭಾವ

ಇಸ್ಲಾಮ್ ಎಂತಹ ಮನೋಭಾವವನ್ನು ಸೃಷ್ಟಿಸುತ್ತದೆಂದರೆ ಅವನಿಂದ ಒಳಿತೇ ಡಬೇಕು. ಅವನ ದೈಹಿಕ, ಮಾನಸಿಕ ಸಾಮರ್ಥ್ಯಗಳು ಮತ್ತು ಸಂಪತ್ತು ಇತರರ ೋಜನಕ್ಕೆ ಬರಬೇಕು. ತನ್ನ ಶಕ್ತ್ಯಾನುಸಾರ ಅವರಿಗೆ ಭೌತಿಕ ಮತ್ತು ನೈತಿಕ ಸಹಾಯ

ಮಾಡಬೇಕು. ಅವನು ಮನೆಯಿಂದ ಗುಲ್ಲು-ಗಲಭೆ ಹರಡುವವನಾಗಿ ಹೊರಡಬಾರ
ಬದಲಾಗಿ ಮಾನವನ ಹಿತ ಮತ್ತು ಅಭಿವೃದ್ಧಿಯನ್ನು ಬಯಸುವವನಾಗಿ ಹೊರಡಬೇ
ಅವನು ಇರುವಲ್ಲಿ ಶಾಂತಿಯ ಸಂದೇಶ ಹರಡುತ್ತಿರಬೇಕು. ಇತರರ ಸಂಕಷ್ಟಗಳ
ಪರಿಹರಿಸಲು ಹಾಗೂ ಅವರ ಧಾರ್ಮಿಕ ಮತ್ತು ನೈತಿಕ ಸುಧಾರಣೆಗೆ ಪ್ರಯತ್ನಿಸಬೇ

ಇಸ್ಲಾಮ್ ವ್ಯಕ್ತಿಯನ್ನು ಸಮಾಜದ ಬೌದ್ಧಿಕ ಮತ್ತು ನೈತಿಕ ಸೇವೆಗೆ ಹ
ಹುರಿದುಂಬಿಸುತ್ತದೆ ಮತ್ತು ಅದರ ಸ್ಫೂರ್ತಿಯನ್ನು ಹೇಗೆ ಉಂಟು ಮಾಡುತ್ತದೆಂಬುದ
ಈ ಕೆಳಗಿನ ಪ್ರವಾದಿ ವಚನದಿಂದ ಗ್ರಹಿಸಬಹುದು.

ಅಬೂ ಸಈದ್ ಖುದ್ರೀ(ರ) ವರದಿ ಮಾಡುತ್ತಾರೆ- ಪ್ರವಾದಿವರ್ಯರು(ಸ) ಹೇಳಿದ
ರಸ್ತೆಗಳಲ್ಲಿ ಕುಳಿತುಕೊಳ್ಳದಿರಿ. ಸಹಾಬಿಗಳು ಕೇಳಿದರು. ನಮಗೆ ಅದಲ್ಲದೆ ಬ
ದಾರಿಯಿಲ್ಲ. ಅಂದರೆ ನಮಗೆ ಕುಳಿತುಕೊಳ್ಳಲೇಬೇಕಾಗುತ್ತದೆ. ಅದು ನಮ್ಮ
ಗಳಾಗಿವೆ. ಅಲ್ಲಿ ನಾವು ಮಾತುಕತೆ ನಡೆಸುತ್ತೇವೆ. ಪ್ರವಾದಿ(ಸ) ಹೇಳಿದರು: ನಿಮಗೆ ಕು
ಕೊಳ್ಳಲೇ ಬೇಕೆಂದಿದ್ದರೆ ರಸ್ತೆಯ ಹಕ್ಕುಗಳನ್ನು ಈಡೇರಿಸಿರಿ. ಸಹಾಬಿಗಳು, ರಸ್ತೆ
ಹಕ್ಕುಗಳೇನು ಎಂದು ಕೇಳಿದಾಗ ಪ್ರವಾದಿ(ಸ) ಹೇಳಿದರು: ದೃಷ್ಟಿಯನ್ನು ಕೆಳಗಿರಿ
ಉಪದ್ರವ ಮಾಡದಿರಿ. ಸಲಾಮ್‌ಗೆ ಉತ್ತರಿಸಿರಿ. ಒಳಿತನ್ನು ಆದೇಶಿಸಿರಿ. ಕೆಡುಕಿನ
ತಡೆಯಿರಿ. (ಬುಖಾರಿ, ಮುಸ್ಲಿ

ಈ ಹದೀಸ್ ಕೆಲವೊಂದು ಪದ ಬದಲಾವಣೆಯೊಂದಿಗೆ ಇತರ ಸಹಾಬಿಗಳಿಂದ
ವರದಿಯಾಗಿದೆ. ಅಬೂತಲ್ಹ(ರ) ವರದಿಯಲ್ಲಿ 'ಸಲಾಮ್‌ಗೆ ಉತ್ತರಿಸಿರಿ' ಎಂದ ಬ
'ಮಧುರ ನುಡಿ'ಯ ಪ್ರಸ್ತಾಪವಿದೆ. ಅಬೂಹುರೈರಾರ ವರದಿಯಲ್ಲಿ ಹದೀಸ್‌ನ ಕೊನೆ
ದಾರಿ ತೋರಿಸಿರಿ ಎಂಬ ಪದ ಹೆಚ್ಚಿಗೆ ಇದೆ. ಇನ್ನೊಂದು ವರದಿಯಲ್ಲಿ ಹೀ
ರಸ್ತೆಯಲ್ಲಿ ಕುಳಿತಿರುವಾಗ ಯಾರದಾದರೂ ದೂರು ಕೇಳಿದರೆ ಅದಕ್ಕೆ ಸ್ಪಂದಿಸಿರಿ ವ
ದಾರಿ ತಪ್ಪಿದವನಿಗೆ ದಾರಿತೋರಿಸಿರಿ.

ಈ ಹದೀಸ್‌ನಿಂದ ತಿಳಿದು ಬರುವುದೇನೆಂದರೆ ಓರ್ವ ವಿಶ್ವಾಸಿಗೆ ಸಮಾ
ನೀಡಿರುವ ಹೊಣೆಗಾರಿಕೆಗಳನ್ನು ಅವನು ರಸ್ತೆ ಮತ್ತು ಪೇಟೆಯಲ್ಲಿ, ಸಭೆ-ಸಮಾ
ಗಳಲ್ಲೂ ಗಮನದಲ್ಲಿರಿಸಬೇಕು. ಅವನು ಇತರರ ಮಾನ ಮರ್ಯಾದೆಯ
ನಾಗಿರುವನು. ಯಾರ ಮೇಲೂ ಕೆಟ್ಟ ದೃಷ್ಟಿ ಬೀರುವ ಅನುಮತಿ ಅವನಿಗಿಲ್ಲ. ಅ
ಇತರರ ಸಂಕಷ್ಟಗಳನ್ನು ದೂರೀಕರಿಸಲು ಹುಟ್ಟಿದ್ದಾನೆ. ಅವನಿಂದ ಯಾರಿಗೂ ಯಾ
ರೀತಿಯ ತೊಂದರೆಯಾಗಬಾರದು. ಜನಸಂಚಾರದಲ್ಲಿ ಅಡ್ಡಿಯುಂಟು ಮಾಡುವ
ಹೊಲಸು ಬಿಸಾಡುವುದು, ದಾರಿ ಹೋಕರೊಂದಿಗೆ ಜಗಳಾಡುವುದು, ಬಯ್ಯು
ಒಟ್ಟಿನಲ್ಲಿ ತೊಂದರೆಯುಂಟು ಮಾಡುವಂತಹ ಯಾವುದೇ ಕೃತ್ಯದಿಂದ ಅ
ದೂರವಿರಬೇಕು. ಯಾರಾದರೂ ಅವನಿಗೆ ಶಾಂತಿ ರಕ್ಷಣೆಯ ಪ್ರಾರ್ಥನೆ ಕಳಿಸಿದರೆ,
ಸಮಾಧಾನಕ್ಕಾಗಿ ಕೂಡಲೇ ಅವನಿಗೆ ಉತ್ತರ ನೀಡಬೇಕು. ಇನ್ನು ಅವನು ಎಲ್ಲಿದ್ದ
ಒಳಿತನ್ನು ಬೋಧಿಸಬೇಕು. ಕೆಡುಕಿನಿಂದ ತಡೆಯಬೇಕು. ಅದರಿಂದ ಸಮಾಜ

ೀತುಗಳು ಬೆಳೆಯುವುದು, ಅದು ಕೆಡುಕಿನಿಂದ ಮುಕ್ತವಾಗುವುದು. ಇನ್ನು ಯಾರಾದರೂ ಾದರೂ ತಪ್ಪು ಹೆಜ್ಜೆಯಿಡ ಬಯಸಿದರೆ ಅವನನ್ನು ವಿಚಾರಿಸುವ ಶಕ್ತಿ ಸಮಾಜಕ್ಕಿದೆ ಂದು ಅವನು ತಿಳಿದಿರಬೇಕು. ಬಯ್ಗುಳ ಮತ್ತು ಒರಟು ಮಾತನ್ನು ಆಡದಿರುವುದೂ ಯ ಹಕ್ಕಾಗಿದೆ. ಅವನ ಮಾತುಗಾರಿಕೆಯಲ್ಲಿ ಸಭ್ಯತೆ, ಪರಿಶುದ್ಧತೆ ಇರಬೇಕು. ಅವನು ್ಲರೊಂದಿಗೆ ಮಧುರ ಮಾತಿನೊಂದಿಗೆ ವ್ಯವಹರಿಸಬೇಕು. ಇದರಿಂದ ಪೇಟೆಯ ಹೆಚ್ಚಿನ ಳ ಮತ್ತು ಗಲಭೆಗಳು ಕೊನೆಗೊಳ್ಳಬಹುದು. ಸಂಕಷ್ಟ ಪೀಡಿತರಿಗೆ ನೆರವಾಗುವುದು ತ್ತು ದಾರಿತಪ್ಪಿದವರಿಗೆ ಮಾರ್ಗದರ್ಶನ ಮಾಡುವುದೂ ಅವನ ಕರ್ತವ್ಯವಾಗಿದೆ.

ಈ ರೀತಿಯಾಗಿ ಇಸ್ಲಾಮ್, ಸಮಾಜದ ಯಾವನೇ ವ್ಯಕ್ತಿಯ ಸಂಕಷ್ಟಗಳಲ್ಲಿ ವನಿಗೆ ನೆರವಾಗಬೇಕು. ಅವನು ಹಸಿದಿದ್ದರೆ ಮತ್ತು ಬಟ್ಟೆ ಬರೆಯಿಲ್ಲದೆ ಅದರ ೇಕ್ಷಿತನಾದಾಗ ಅವನಿಗೆ ಆಹಾರ ಪಾನೀಯ ಮತ್ತು ಬಟ್ಟೆ ನೀಡಬೇಕು. ಸೂರಿಲ್ಲ ವನಾಗಿದ್ದರೆ ಅವನಿಗೆ ವಾಸದ ವ್ಯವಸ್ಥೆ ಮಾಡಬೇಕು. ಅವರು ರೋಗಿಯಾಗಿದ್ದರೆ ಅವನ ತ್ಸೆ ಮತ್ತು ಆರೈಕೆ ಮಾಡಬೇಕು. ಅವನು ನಿರುದ್ಯೋಗಿಯಾಗಿದ್ದರೆ ಉದ್ಯೋಗದ ವಸ್ಥೆ ಮಾಡಬೇಕು ಎಂಬಿತ್ಯಾದಿ ವಿಷಯಗಳಿಗೆ ಪ್ರೇರಣೆ ಮತ್ತು ತಾಕೀತು ಮಾಡಿದೆ. ಿ ನಿರಕ್ಷರಿಯಾಗಿದ್ದರೆ ಅವನಿಗೆ ಶಿಕ್ಷಣ ಕೊಡಿಸಬೇಕು. ಮರ್ದಿತನಾಗಿದ್ದರೆ ಮರ್ದಕ ದ ಅವನಿಗೆ ರಕ್ಷಣೆಯೊದಗಿಸಬೇಕು ಎಂದು ಸಾರಿದೆ. ಈ ಸ್ಫೂರ್ತಿಯನ್ನು ಉತ್ತೇಜಿಸಲಿಕ್ಕಾಗಿ ು ಅಕ್ರಮ-ಅತ್ಯಾಚಾರವನ್ನು ಖಂಡಿಸಿದೆ. ಅದರ ಕೆಡುಕುಗಳನ್ನು ಅನಾವರಣಗೊಳಿಸಿದೆ. ಾರೂ ಇನ್ನೊಬ್ಬನ ದೌರ್ಬಲ್ಯ, ವೃದ್ಧಾಪ್ಯ, ಬಡತನ ಮತ್ತು ನಿರಕ್ಷರತೆಯನ್ನು ಶೋಷಿಸ ರದೆಂಬುದೂ ಬದಲು ಅವನಿಗೆ ಪ್ರಯೋಜನ ನೀಡಲು ಮತ್ತು ಅವನಲ್ಲಿರುವ ್ಯನತೆಗಳನ್ನು ದೂರೀಕರಿಸಲು ಪ್ರಯತ್ನಿಸಬೇಕೆಂದೂ ಒತ್ತು ಕೊಟ್ಟು ಸಾರಿದೆ. ಅವನು ಕಷ್ಟದಲ್ಲಿರುವುದನ್ನು ಕಂಡು ಸಂತೋಷಗೊಳ್ಳದೆ ಸಂಕಷ್ಟವನ್ನು ಅರಿತು ಅದರಿಂದ ರುಗೊಳಿಸಲು ಪ್ರಯತ್ನಿಸಬೇಕೆಂದು ಹೇಳಿದೆ. ಈ ರೀತಿ ಇಸ್ಲಾಮ್ ಅಕ್ರಮವನ್ನು ವ್ರವಾಗಿ ದ್ವೇಷಿಸುವ ಮತ್ತು ಎಲ್ಲೆಲ್ಲೂ ನ್ಯಾಯ, ಔದಾರ್ಯದ ಭಾವನೆಗಳ ಪ್ರಾಬಲ್ಯ ್ಳಂತಹ ಸಮಾಜವನ್ನು ನಿರ್ಮಿಸಬಯಸುತ್ತದೆ.

ಮಾನವ ಸೇವೆ ಮತ್ತು ಅವರ ಕಲ್ಯಾಣಕ್ಕಾಗಿರುವ ಎಲ್ಲ ಪ್ರಯತ್ನಗಳೂ ಇಸ್ಲಾಮಿನ ಷ್ಟಿಯಲ್ಲಿ ಇಬಾದತ್ ಆಗಿದೆ. ಅದರ ವಿವರಗಳು ಮುಂದೆ ಬರಲಿದೆ.

## ವೆಯೂ ಆರಾಧನೆಯಾಗಿದೆ

ಪವಿತ್ರ ಕುರ್‌ಆನ್ ಆರಾಧನೆಯನ್ನು ಮಾನವನ ಜೀವನೋದ್ದೇಶವೆಂದು ಸಾರಿದೆ ದ್ದಾರಿಯಾತ್: 56). ಆರಾಧನೆಯನ್ನು ಅಲ್ಲಾಹನ ಸಾಮೀಪ್ಯ ಮತ್ತು ಆತನ ಸಂಪ್ರೀತಿಗಾಗಿ ಾಡಲಾಗುತ್ತದೆ. ಇದು ಶಾರೀರಿಕವೂ ಸಾಂಪತ್ತಿಕವೂ ಆಗಿದೆ. ಶಾರೀರಿಕ ಆರಾಧನೆಯನ್ನು ಯಿ ಮಾತು ಮತ್ತು ದೇಹದ ಚಲನೆಗಳ ಮೂಲಕ ಮಾಡಲಾಗುತ್ತದೆ. ಸಾಂಪತ್ತಿಕ ಾಧನೆಯಲ್ಲಿ ಧನಕನಕಗಳನ್ನು ಅಲ್ಲಾಹನ ಆಸ್ಥಾನಕ್ಕೆ ಅರ್ಪಿಸುತ್ತಾನೆ. ಸಾಂಪತ್ತಿಕ

ಆರಾಧನೆಯ ಉದ್ದೇಶಗಳ ಪೈಕಿ ದೇವ ಸೃಷ್ಟಿಗಳ ಸೇವೆ, ಅವರಿಗೆ ಸಹಾಯ ಸಹಕಾರ ಒಂದಾಗಿದೆ. ಶಾರೀರಿಕ ಆರಾಧನೆಯಲ್ಲಿ ಅಲ್ಲಾಹನೊಂದಿಗೆ ಸಂಬಂಧವನ್ನು ಅ ಗ್ರಹಿಸುತ್ತಾನೆ. ಆದರೆ ಸಾಂಪತ್ತಿಕ ಆರಾಧನೆಯಲ್ಲಿ ಈ ಸಂಬಂಧವನ್ನು ಅವನು ಕ ಗ್ರಹಿಸುತ್ತಾನೆ. ಅದನ್ನು ಗ್ರಹಿಸಬೇಕಾದರೆ ಸೇವೆಯನ್ನು ಆರಾಧನೆಯ ಸ್ಫೂರ್ತಿಯೊ ಮಾಡಬೇಕಾಗುತ್ತದೆ. ಓರ್ವ ದೇವದಾಸನಿಗೆ ಸಹಾಯ ಮಾಡುವ ವೇಳೆ ದೇವ ಸಾಮೀ ಕಲ್ಪನೆ ಜೀವಂತವಾಗಿರಬೇಕು. ಇದರಿಂದಾಗಿ ಭೌತಿಕ, ಆರ್ಥಿಕ ಲಾಭದ ಕಾರ್ಯಗ ಮಾಡುವಾಗಲೂ ಮಾನವನಿಗೆ ಆರಾಧನೆಯ ಸಂತೋಷವುಂಟಾಗುತ್ತದೆ.

ಇಸ್ಲಾಮಿನ ದೃಷ್ಟಿಯಲ್ಲಿ, ಸೃಷ್ಟಿ ಸೇವೆಯು ಲೌಕಿಕ ಕಾರ್ಯವಲ್ಲ. ಅದು ಅ ಆರಾಧನೆಯಾಗಿದೆ. ಈ ವಾಸ್ತವಿಕತೆಯನ್ನು ಅರಿಯಲು ಅದರ ಸಂಪೂರ್ಣ ಆರಾ ವ್ಯವಸ್ಥೆಯನ್ನು ಗಮನಿಸಬೇಕಾಗಿದೆ.

## ನಮಾಝ್ ಮತ್ತು ಝಕಾತ್‌ನ ಸಂಬಂಧ

ನಮಾಝ್ ಶಾರೀರಿಕ ಆರಾಧನೆಯಾಗಿದೆ. ಝಕಾತ್ ಸಾಂಪತ್ತಿಕ ಆರಾಧನೆಯಾ ನಮಾಝ್ ದಾಸನ ಕಡೆಯಿಂದ ದೇವನ ಮಹಾನತೆ ಮತ್ತು ತನ್ನ ದಾಸ್ಯತ್ವದ ಘೋ ಯಾಗಿದೆ. ಝಕಾತ್ ಅವನ ಮನಸ್ಸಿನಲ್ಲಿ ಸಹಾನುಭೂತಿಯ ಭಾವನೆಯಿರುವುದರ ವ ಅವನು ಇತರರಿಗಾಗಿ ಹಣ ಖರ್ಚು ಮಾಡಬಲ್ಲನೆಂಬುದರ ಪ್ರಕಟನೆಯಾಗಿದೆ. ಕುರ್‌ಆನಿ ನಮಾಝ್ ಮತ್ತು ಝಕಾತನ್ನು ಸಾಮಾನ್ಯವಾಗಿ ಒಟ್ಟೊಟ್ಟಿಗೆ ಪ್ರಸ್ತಾಪಿಸಲಾಗಿದೆ. ಎರಡ ಸಮಾನ ಪ್ರಾಮುಖ್ಯತೆ ನೀಡಿ, ಪದೇಪದೇ ಅವುಗಳಿಗೆ ಒತ್ತು ನೀಡಲಾಗಿದೆ. ಇ ಅರ್ಥವೇನೆಂದರೆ, ಸಾಂಪತ್ತಿಕ ಆರಾಧನೆಯೂ ಅದರ ದೃಷ್ಟಿಯಲ್ಲಿ ಶಾರೀರಿಕ ಆರಾ ಗಿಂತ ಕಡಿಮೆ ಮಹತ್ವದ್ದೇನಲ್ಲ. ದೇವ ಸಂಪ್ರೀತಿಗಾಗಿ ಯಾವ ರೀತಿ ಶಾರಿ ಆರಾಧನೆಯು ಅಗತ್ಯವೋ ಅದೇ ರೀತಿಯಲ್ಲಿ ಸಾಂಪತ್ತಿಕ ಆರಾಧನೆಯನ್ನೂ ಅಗತ್ಯವೆಂದು ಪರಿಗಣಿಸುತ್ತದೆ. ಅದು ಮಾನವನಿಗೆ ಯಾವ ಧರ್ಮವನ್ನು ಅವಲಂ ಬೇಕೆಂದು ಹೇಳುತ್ತದೋ ಅದು ದೇವನ ಮುಂದೆ ಭಯಭಕ್ತಿಯಿಂದ ಬಾಗಬೇಕೆ ಮಾತ್ರವಲ್ಲ ಮಾನವನು ತನ್ನ ಸಂಪತ್ತಿನಲ್ಲಿ ದೇವನ ದಾಸರ ಹಕ್ಕನ್ನು ಅಂಗೀಕ ಅವಶ್ಯಾರ್ಥಿಗಳ ಮೇಲೆ ಖರ್ಚು ಮಾಡಬೇಕೆಂದು ಸಾರುತ್ತದೆ.

"ಅವರಿಗೆ ನೀಡಲಾಗಿದ್ದ ಆದೇಶವು- ಅವರು ತಮ್ಮ ಧರ್ಮವನ್ನು ನಿಷ್ಕಳಂಕ ಅಲ್ಲಾಹನಿಗೆ ಮಾತ್ರ ಮೀಸಲಾಗಿಟ್ಟು ಏಕನಿಷ್ಠೆಯಿಂದ ಅಲ್ಲಾಹನ ದಾಸ್ಯ ಮಾಡಬೆ ನಮಾಝನ್ನು ಸಂಸ್ಥಾಪಿಸಬೇಕು ಮತ್ತು ಝಕಾತನ್ನು ನೀಡಬೇಕು- ಎಂಬುದರ ಹೊ ಬೇರೇನೂ ಆಗಿರಲಿಲ್ಲ. ಇದುವೇ ಅತ್ಯಂತ ಸರಿಯಾದ ಧರ್ಮ."

(ಪವಿತ್ರ ಕುರ್‌ಆನ್, 9

ಈ ಸೂಕ್ತದಲ್ಲಿ ನಿಸ್ಪೃಹತೆ ಮತ್ತು ಏಕಾಗ್ರತೆಯೊಂದಿಗೆ ಆರಾಧನೆ ಮಾಡಬೇ ಆಜ್ಞೆಯ ಬಳಿಕ ನಮಾಝ್ ಮತ್ತು ಝಕಾತಿನಿಂದ ಅದನ್ನು ವಿವರಿಸಲಾಗಿದೆ.

ವುಗಳ ಪಾಲನೆಯಿಂದಲೇ ಆರಾಧನೆಯ ಹಕ್ಕು ಈಡೇರುವುದೆಂಬುದರ ಪ್ರಕಟಣೆ ಯಾಗಿದೆ. ಈ ಗುಣಗಳ ಹೊರತು ಆರಾಧನೆಯ ಯಾವುದೇ ಕಲ್ಪನೆಯಿಲ್ಲ. ಕೆಲವು ಕಡೆ ಬಾದತ್‌ನೊಂದಿಗೆ ಖೈರ್(ಒಳಿತು) ಎಂಬ ಪದ ಬಂದಿದೆ. ಅದು ಹೆಚ್ಚು ಸಮಗ್ರ ಾಗಿದೆ. ಒಂದೆಡೆ ಹೀಗೆ ಹೇಳಲಾಗಿದೆ.

**''ಸತ್ಯವಿಶ್ವಾಸಿಗಳೇ 'ಬಾಗಿರಿ' ಮತ್ತು 'ಸಾಷ್ಟಾಂಗವೆರಗಿರಿ' ಮತ್ತು ನಿಮ್ಮ ಪ್ರಭುವಿನ ಾಸ್ಯ-ಆರಾಧನೆ ಮಾಡಿರಿ, ಸತ್ಕರ್ಮಗಳನ್ನೆಸಗಿರಿ- ಇದರಿಂದಲೇ ನಿಮಗೆ ಯಶಸ್ಸು ಗುವುದೆಂದು ನಿರೀಕ್ಷಿಸಬಹುದು.''**

**(ಪವಿತ್ರ ಕುರ್‌ಆನ್, 22:77)**

ಇಲ್ಲಿ ಇಬಾದತ್‌ಗಿಂತ ಮೊದಲು ರುಕೂಅ್, ಸುಜೂದ್ ಅಂದರೆ ನಮಾಝ್‌ನ ಜ್ಞೆ ನೀಡಲಾಗಿದೆ. ಇಬಾದತ್‌ನ ನಂತರ ಸತ್ಕರ್ಮ ಮಾಡಲು ಆಜ್ಞಾಪಿಸಲಾಗಿದೆ. ಇಬ್ನು ಬ್ಬಾಸ್ ಹೇಳುವ ಪ್ರಕಾರ ಖೈರ್ ಎಂದರೆ ಕುಟುಂಬ ಸಂಬಂಧ ಮತ್ತು ಉನ್ನತ ಾರಿತ್ರ್ಯವಾಗಿದೆ.[1] ಈ ಎಲ್ಲ ಸತ್ಕರ್ಮಗಳು ಇಬಾದತ್‌ನಲ್ಲಿ ಒಳಗೊಳ್ಳುತ್ತದೆ. ಇದರತ್ತ ಶೇಷ ಗಮನ ಹರಿಸಬೇಕೆಂಬ ಉದ್ದೇಶದಿಂದಲೇ ಇದನ್ನು ಪ್ರತ್ಯೇಕವಾಗಿ ಪ್ರಸ್ತಾಪಿಸ ಾಗಿದೆ. ಇದೇ ಉದ್ದೇಶಕ್ಕಾಗಿ ಇಬಾದತ್‌ನಿಂದ ನಮಾಝನ್ನು ಪ್ರತ್ಯೇಕಿಸಿ ಪ್ರಸ್ತಾಪಿಸ ಾಗಿದೆ. ವಸ್ತುತಃ ನಮಾಝ್ ಇಬಾದತ್ ಆಗಿದೆಯೆಂಬುದರಲ್ಲಿ ಯಾವುದೇ ಸಂಶಯವಿಲ್ಲ.

ಕುರ್‌ಆನಿನಲ್ಲಿ ನಮಾಝ್, ಝಕಾತ್ ಮತ್ತು ಸತ್ಕರ್ಮಗಳ ಬಳಿಕ ಇಬಾದತ್‌ನ ್ರಸ್ತಾಪ ಬರಲು ಅದರೊಳಗೆ ಸಕಲ ಸತ್ಕರ್ಮಗಳೂ ಒಳಗೊಂಡಿರುವುದು ಕಾರಣವಾಗಿದೆ. ಂದೆಡೆ ಇಬ್ರಾಹೀಮ್(ಅ) ಮತ್ತು ಅವರ ಕುಟುಂಬ ಪರಂಪರೆಯ ಕೆಲವು ಪ್ರವಾದಿ ಳನ್ನು ಪ್ರಸ್ತಾಪಿಸಿದ ಬಳಿಕ ಹೀಗೆನ್ನಲಾಗಿದೆ.

**''ನಾವು ಅವರನ್ನು ನಮ್ಮ ಅಪ್ಪಣೆಯಂತೆ ಮಾರ್ಗದರ್ಶನ ನೀಡುತ್ತಿದ್ದ ನಾಯಕರನ್ನಾಗಿ ಾಡಿದೆವು ಮತ್ತು ನಾವು ಅವರಿಗೆ 'ದಿವ್ಯವಾಣಿ' ಮೂಲಕ ಸತ್ಕರ್ಮವೆಸಗುವ, ನಮಾಝ್ ಂಸ್ಥಾಪಿಸುವ ಮತ್ತು ಝಕಾತ್ ನೀಡುವ ಆದೇಶ ನೀಡಿದೆವು ಮತ್ತು ಅವರು ನಮ್ಮ ಾಪಾಸಕರಾಗಿದ್ದರು.''** **(ಪವಿತ್ರ ಕುರ್‌ಆನ್, 21:73)**

ಮಾನವರ ಸೇವೆ ಮತ್ತು ಕಲ್ಯಾಣಕ್ಕಾಗಿ ಮಾಡಲಾಗುವ ಕಾರ್ಯಗಳು ದೇವಾರಾಧನೆ ಯಾಗುತ್ತದೆ ಎಂದ ಮೇಲೆ ಅದರ ಶ್ರೇಷ್ಠತೆಗೆ ಅದಕ್ಕಿಂತ ದೊಡ್ಡ ಪುರಾವೆ ಬೇಕೆ?

---

1. ಇಮಾಮ್ ರಾಝೀ ಈ ವಾಕ್ಯವನ್ನು ಉದ್ಧರಿಸಿದ ನಂತರ ಹೀಗೆ ಹೇಳುತ್ತಾರೆ- ಒಳಿತನ್ನು ಾಡುವುದರ ಎರಡು ರೂಪಗಳಿವೆ: 1) ಅಲ್ಲಾಹನ ಮಹಾನತೆಯನ್ನು ಕೊಂಡಾಡುವುದು. 2) ಆತನ ಾಸರೊಂದಿಗೆ ಪ್ರೀತಿ ಮತ್ತು ಔದಾರ್ಯದಿಂದ ವರ್ತಿಸುವುದು. ಅಂದರೆ ನಮಾಝ್‌ನ ನಂತರ ಬಾದತ್‌ನ ವಿಶಾಲಾರ್ಥದ ಆಜ್ಞೆ ನೀಡಲಾಗಿದೆ. ಆ ಬಳಿಕ ಒಳಿತಿನ ಆಜ್ಞೆ ನೀಡಲಾಗಿದ್ದು ಅದು ದಕ್ಕಿಂತಲೂ ವಿಶಾಲಾರ್ಥವನ್ನು ಹೊಂದಿದೆ(ತಫ್ಸೀರ್ ಕಬೀರ್) ಇನ್ನು 'ಇಬಾದತ್' ಎಂಬುದು ಕೇವಲ ಾಜೆಯಾಗಿರದೆ ಇಡೀ ಜೀವನದಲ್ಲಿ ಅಲ್ಲಾಹನ ಆಜ್ಞಾಪಾಲನೆಯೆಂದಾದರೆ ಆದರ ಮೇರೆಯೂ ಖೈರ್‌ನ ೀರೆಗಿಂತ ಬಹಳ ವಿಶಾಲವಾಗಿದೆ. ಇಬಾದತ್‌ನ ಇದೇ ವಿಶಾಲಾರ್ಥ ಸರಿಯಾಗಿದೆ.

## ಉಪವಾಸ ವ್ರತದ ಪ್ರಾಯಶ್ಚಿತ್ತ

ಸಾಂಪತ್ತಿಕ ಆರಾಧನೆಯು ಕೆಲವೊಮ್ಮೆ ಶಾರೀರಿಕ ಆರಾಧನೆಯ ಬದಲಿಯಾಗುತ್ತ ಶಾರೀರಿಕ ಆರಾಧನೆಯಲ್ಲಿ ಸಂಭವಿಸಿದ ಲೋಪದೋಷಗಳಿಗೆ ಅದು ಪ್ರಾಯಶ್ಚಿತ್ತವಾಗಿ

ನಮಾಝ್‌ನಂತೆಯೇ ಉಪವಾಸ ವ್ರತ ಕೂಡಾ ಶಾರೀರಿಕ ಆರಾಧನೆಯಾಗಿ ಅದರಲ್ಲಿ ಮಾನವನು ಅಲ್ಲಾಹನಿಗಾಗಿ ಹಸಿವು, ಬಾಯಾರಿಕೆ ಹಾಗೂ ವಿಷಯಾಸಕ್ತಿ ಮೇಲೆ ನಿಯಂತ್ರಣ ಸಾಧಿಸಲು ಪ್ರಯತ್ನಿಸುತ್ತಾನೆ.

ಈ ಕುರಿತು ಪ್ರಥಮ ಆಜ್ಞೆ ಹೀಗಿದೆ:

"ಎಣಿಕೆಯ ಕೆಲವೇ ದಿನಗಳ ಉಪವಾಸ ವ್ರತವದು. ನೀವೆಲ್ಲಾದರೂ ರೋ ಯಾಗಿದ್ದರೆ ಅಥವಾ ಪ್ರಯಾಣದಲ್ಲಿದ್ದರೆ ಇತರ ದಿನಗಳಲ್ಲಿ ಅಷ್ಟೇ ಸಂಖ್ಯೆಯನ್ನು ಪೂ ಗೊಳಿಸಿಕೊಳ್ಳಬೇಕು. ಉಪವಾಸವಿರಲು ಶಕ್ತರಾದವರು (ಉಪವಾಸವಿರದಿದ್ದ ಪ್ರಾಯಶ್ಚಿತ್ತವನ್ನು ಕೊಡಬೇಕು. ಒಂದು ದಿನದ ಉಪವಾಸದ ಪ್ರಾಯಶ್ಚಿತ್ತವು ಓ ಬಡವನಿಗೆ ಆಹಾರ ನೀಡುವುದಾಗಿದೆ ಮತ್ತು ತನ್ನ ಇಚ್ಛೆಯಿಂದ ಇನ್ನಷ್ಟು ಸತ್ಕಾ ಮಾಡಿದರೆ ಇದು ಅವನಿಗೆ ಇನ್ನೂ ಉತ್ತಮ. ಆದರೆ ನೀವು ಅರಿಯುವವರಾಗಿ ಉಪವಾಸವಿರುವುದೇ ನಿಮಗೆ ಅತ್ಯುತ್ತಮ." (ಪವಿತ್ರ ಕುರ್‌ಆನ್, 2:1

ಉಪವಾಸ ವ್ರತ ಆಚರಿಸಲು ಶಕ್ತನಾಗಿದ್ದೂ ಅವನಿಗೆ ಆಚರಿಸದಿರಲು ಮ ಅದರ ಬದಲಾಗಿ ಕನಿಷ್ಠ ಒಬ್ಬ ದರಿದ್ರನಿಗೆ ಆಹಾರ ನೀಡಲು ಈ ಸೂಕ್ತದ ಪ್ರ ಅನುಮತಿಯಿತ್ತು. ಅದಕ್ಕಿಂತ ಹೆಚ್ಚಾಗಿ ಬಡವರ ಸೇವೆ ಮಾಡಿದರೆ ಅದು ಇನ್ನ ಪುಣ್ಯದಾಯಕವಾದೀತು. ಆದರೆ ಅದು ಕಡ್ಡಾಯವೇನೂ ಅಲ್ಲ. ಜೊತೆಗೇ ಉಪ ಆಚರಿಸುವುದು ಉತ್ತಮವೆಂದು ಹೇಳಲಾಗಿತ್ತು. ಅನಂತರ ಈ ಅನುಮತಿ ರದ್ದಾಯಿ ರಮಾಝಾನಿನ ಉಪವಾಸ ಎಲ್ಲರಿಗೂ ಕಡ್ಡಾಯವಾಯಿತು. ಆದರೆ ಪ್ರಯಾಣಿಕರು ಮ ರೋಗಿಗಳು ಬಿಟ್ಟು ಹೋದ ಉಪವಾಸಗಳನ್ನು ಮುಂದೆ ಕಝಾ ಮಾಡಬಹುದೆ ಅನುಮತಿ ನೀಡಲಾಯಿತು. (ಪವಿತ್ರ ಕುರ್‌ಆನ್, 2:1

ಈ ವಚನದ ಹಿನ್ನೆಲೆಯಲ್ಲಿ, ಉಪವಾಸ ಆಚರಿಸುವ ಸಾಮರ್ಥ್ಯವಿರುವವ ಪ್ರಾಯಶ್ಚಿತ್ತವಾಗಿ ಓರ್ವ ಬಡವನಿಗೆ ಆಹಾರ ನೀಡುವ ಮೂಲಕ ಉಪ ಆಚರಿಸದಿರಲು ಆರಂಭದಲ್ಲಿ ಅನುಮತಿಸಲಾಗಿತ್ತು. ಇನ್ನು ಬಡವರ ಸೇವೆಗೈದರೆ ಹೆಚ್ಚು ಪುಣ್ಯ ಫಲಾರ್ಹವಾಗಿದೆ. ಆದರೆ ಅದು ಕಡ್ಡಾಯವಲ್ಲ. ಅದರೊಂದಿಗೆ ಉಪ ಆಚರಿಸುವುದೇ ಉತ್ತಮವೆಂದು ಹೇಳಲಾಗಿದೆ. ತರುವಾಯ ಈ ವಿನಾಯಿತಿಯ ರದ್ದುಗೊಳಿಸಿ ರಮಝಾನಿನ ಉಪವಾಸವನ್ನು ಎಲ್ಲರಿಗೂ ಕಡ್ಡಾಯಗೊಳಿಸಲಾಯಿ ಹಾಗಿದ್ದರೂ ರೋಗಿಗಳು ಮತ್ತು ಪ್ರಯಾಣಿಕರಿಗೆ ಆ ಬಳಿಕ ಉಪವಾಸ ಆಚ ಭರ್ತಿಗೊಳಿಸಬೇಕೆಂಬ ಶರತ್ತಿನೊಂದಿಗೆ ಉಪವಾಸ ತೊರೆಯಲು ಅನುಮತಿಸಲಾಯಿ (ಪವಿತ್ರ ಕುರ್‌ಆನ್, 2:185) ಆದರೆ ವೃದ್ಧಾಪ್ಯ ಅಥವಾ ವಾಸಿಯಾಗದ ರೋಗದಿ

ಕಲುವವರಿಗೆ ಪ್ರಾಯಶ್ಚಿತ್ತವನ್ನು ಅನ್ವಯಗೊಳಿಸಲಾಯಿತು. ಅವರು ಪ್ರತಿಯೊಂದು ಪವಾಸದ ಬದಲಿಗೆ ಓರ್ವ ಬಡವನಿಗೆ 2 ಹೊತ್ತಿನ ಆಹಾರ ನೀಡಬೇಕೆಂದು ದೇಶಿಸಲಾಯಿತು. (ಬುಖಾರಿ)

ಉಪವಾಸ ಆಚರಿಸುವ ಸಾಮರ್ಥ್ಯವಿಲ್ಲದ ಸ್ಥಿತಿಯಲ್ಲಿ ಆರ್ಥಿಕ ಪ್ರಾಯಶ್ಚಿತ್ತವು ಪವಾಸಕ್ಕೆ ಪರ್ಯಾಯವಾಗುತ್ತದೆ. ಅಂಥ ಸಂದರ್ಭಗಳಲ್ಲಿ ಉಪವಾಸ ಕಡ್ಡಾಯವಿಲ್ಲ. ಷ್ಟದಲ್ಲಿರುವ ಮಾನವರಿಗೆ ನೆರವಾಗುವ ಮೂಲಕ ಅಂಥವರಿಗೆ ವಿನಾಯಿತಿ ದೊರೆಯು ದೆಂದು ಇಲ್ಲಿ ಸೂಚಿಸಲಾಗಿದೆ.

## ಪವಾಸ ಮತ್ತು ಫಿತ್ರ್ ಝಕಾತ್

ರಮಝಾನ್ ಉಪವಾಸದ ಕೊನೆಯಲ್ಲಿ 'ಫಿತ್ರ್ ಝಕಾತ್' ಕಡ್ಡಾಯವಾಗುತ್ತದೆ. ಕುರಿತು ಪ್ರವಾದಿ ವಚನದಲ್ಲಿ ಹೀಗೆ ಸ್ಪಷ್ಟಪಡಿಸಲಾಗಿದೆ. "ಅಹಿತಕರ ಮಾತು ಮತ್ತು ರರ್ಥಕ ಕ್ರಿಯೆಗಳಿಂದ ವ್ರತವನ್ನು ಶುದ್ಧೀಕರಿಸಿ, ನಿರ್ಗತಿಕರಿಗೆ ಜೀವನಾಧಾರವಾಗಲಿಕ್ಕಾಗಿ ತ್ರ್ ಝಕಾತನ್ನು ಕಡ್ಡಾಯಗೊಳಿಸಲಾಗಿದೆ."

[ಅಬೂದಾವೂದ್, ವರದಿ: ಅಬ್ದುಲ್ಲಾ ಬಿನ್ ಅಬ್ಬಾಸ್(ರ)]

ಮನಃಪೂರ್ವಕವಾಗಿಯಲ್ಲದಿದ್ದರೂ ಉಪವಾಸದಲ್ಲಿ ಲೋಪದೋಷಗಳು ಸಹಜ ಗಿದೆ. ಫಿತ್ರ್ ಝಕಾತ್‌ನಿಂದ ನಿರ್ಗತಿಕರಿಗೆ ಸ್ವಲ್ಪ ಸಹಕಾರ ದೊರೆಯುತ್ತದೆ. ಆ ಮೂಲಕ ಉಪವಾಸದ ಲೋಪದೋಷಗಳು ನಿವಾರಣೆಯಾಗುವುದೆಂದು ಈ ಹದೀಸ್ ಂದ ವ್ಯಕ್ತವಾಗುತ್ತದೆ. ಈ ರೀತಿ ಅನೇಕ ಸಂದರ್ಭಗಳಲ್ಲಿ ಆರ್ಥಿಕ ಆರಾಧನೆಯು ಹಿಕ ಆರಾಧನೆಗೆ ಸಮಾನ ಅಥವಾ ಪರ್ಯಾಯವಾಗುತ್ತದೆ.

## ಜ್ಜ್‌ನ ಪ್ರಾಯಶ್ಚಿತ್ತ

ನಮಾಝ್ ಮತ್ತು ಉಪವಾಸದಂತೆಯೇ ಹಜ್ಜ್ ಸಂಪೂರ್ಣ ದೈಹಿಕ ಆರಾಧನೆ ಲ್ಲ. ಏಕೆಂದರೆ, ಅದರ ನಿರ್ವಹಣೆಗೆ ಹಣದ ಅಗತ್ಯವೂ ಇದೆ. ಈ ಆಧಾರದಲ್ಲಿ ಜ್ಜ್‌ನಲ್ಲಿ ದೈಹಿಕ ಮತ್ತು ಆರ್ಥಿಕ ಆರಾಧನೆಯ ಸಮ್ಮಿಲನ ಗೋಚರಿಸುತ್ತದೆ. ವೆರಡರ ಪ್ರಾಧಾನ್ಯವು ಹಜ್ಜ್‌ನಲ್ಲಿ ಗೋಚರಿಸಿದರೂ ದೈಹಿಕ ಆರಾಧನೆಯೇ ಅದರಲ್ಲಿ ಮುಖವಾಗಿದೆ. ಹಜ್ಜ್‌ನ ಕುರಿತು ಕುರ್‌ಆನಿನ ಆದೇಶ ಹೀಗಿದೆ, "ಅಲ್ಲಾಹನ ಂತುಷ್ಟಿಗಾಗಿ 'ಹಜ್ಜ್' ಮತ್ತು 'ಉಮ್ರ'ಗಳ ಸಂಕಲ್ಪ ಮಾಡಿದಾಗ ಅದನ್ನು ಪೂರ್ತಿ ಳಿಸಿರಿ. ನೀವೆಲ್ಲಾದರೂ ಸುತ್ತುವರಿಯಲ್ಪಟ್ಟಾಗ ನಿಮಗೊದಗಿರುವ ಬಲಿಯನ್ನು ಲ್ಲಾಹನ ಸನ್ನಿಧಿಗೆ ಅರ್ಪಿಸಿರಿ ಮತ್ತು ಬಲಿಯು ತನ್ನ ಸ್ಥಾನವನ್ನು ತಲಪುವ ತನಕ ಮ್ಮ ತಲೆ ಬೋಳಿಸಬೇಡಿರಿ. ಆದರೆ ರೋಗಿಯಾಗಿರುವ ಅಥವಾ ಶಿರೋಬಾಧೆಯ ರಣದಿಂದ ತಲೆ ಬೋಳಿಸಿಕೊಂಡಾತನು ಪ್ರಾಯಶ್ಚಿತ್ತವಾಗಿ ಉಪವಾಸ ಆಚರಿಸಬೇಕು, ನ ಕೊಡಬೇಕು ಅಥವಾ ಬಲಿಯರ್ಪಿಸಬೇಕು. ಅನಂತರ ನಿಮಗೆ ನೆಮ್ಮದಿಯೊದಗಿದಾಗ

(ಮತ್ತು ನೀವು ಹಜ್ಜ್‌ಗಿಂತ ಮುಂಚಿತವಾಗಿ ಮಕ್ಕಾ ತಲಪಿದರೆ) ಹಜ್ಜ್‌ನ ಕಾಲ ಬರು ತನಕ 'ಉಮ್ರ'ದಿಂದ ಫಲ ಪಡೆಯುವಾತನು ತನ್ನ ಶಕ್ತ್ಯಾನುಸಾರ ಬಲಿಯರ್ಪಿಸಬೇ ಬಲಿಯೊದಗದಿದ್ದರೆ, ಮೂರು ದಿನಗಳ ಉಪವಾಸವನ್ನು 'ಹಜ್ಜ್' ಕಾಲದಲ್ಲಿಯೂ ಏ ದಿನಗಳ ಉಪವಾಸವನ್ನು ಸ್ವಗೃಹಕ್ಕೆ ತಲಪಿದ ಬಳಿಕವೂ ಹೀಗೆ ಹತ್ತು ದಿನ ಉಪವಾಸವನ್ನು ಪೂರ್ತಿಯಾಗಿ ಆಚರಿಸಬೇಕು. ಈ ರಿಯಾಯಿತಿಯು ಮಸ್ಜಿದುಲ್ ಹರಾಮ್‌ನ ಸಮೀಪದ ನಿವಾಸಿಗಳಲ್ಲದವರಿಗಾಗಿದೆ. ಅಲ್ಲಾಹನ ಈ ಆಜ್ಞೆಗಳ ಉಲಂಘಿಸದಿರಿ. ಅಲ್ಲಾಹ್ ಕಠಿಣವಾಗಿ ಶಿಕ್ಷಿಸುವವನೆಂಬುದನ್ನು ನೀವು ಚೆನ್ನಾ ತಿಳಿದಿರಬೇಕು." (2:19

ಈ ವಚನದಲ್ಲಿ ಪ್ರಸ್ತಾಪಿಸಲಾಗಿರುವ ಹಜ್ಜ್‌ಗೆ ಸಂಬಂಧಿಸಿದ ಕ್ರಿಯೆಗಳ ವಿವರ ಇಲ್ಲಿ ಮುಖ್ಯವಲ್ಲ. ಇಹ್ರಾಮ್‌ನಲ್ಲಿರುವಾಗ ನ್ಯಾಯೋಚಿತ ಕಾರಣಗಳಿಂದ ತ ಬೋಳಿಸಿದರೆ ಬಲಿ ನೀಡಬೇಕು, ಉಪವಾಸ ಆಚರಿಸಬೇಕು ಅಥವಾ ದಾನ ನೀ ಪ್ರಾಯಶ್ಚಿತ್ತ ಮಾಡಬೇಕೆಂದು ಈ ವಚನದಲ್ಲಿ ಹೇಳಲಾಗಿದೆ. ಹೀಗೆ ಇಲ್ಲಿಯ ಆರ್ಥಿಕ ಆರಾಧನೆಯನ್ನು ದೈಹಿಕ ಆರಾಧನೆಗೆ ಸಮಾನವಾಗಿ ಸಾರಲಾಗಿದೆ. ಹಾಗೆಯ ತಮತ್ತುಅ್ ಅಥವಾ ಕಿರಾನ್ ರೀತಿಯಲ್ಲಿ ಹಜ್ಜ್ ನಿರ್ವಹಿಸುವುದಿದ್ದರೆ ಅಂತ ವ್ಯಕ್ತಿಯು ಬಲಿ ನೀಡಬೇಕು ಅಥವಾ ಬಲಿ ಪ್ರಾಣಿ ದೊರೆಯದಿದ್ದರೆ ಹತ್ತು ದಿ ಉಪವಾಸ ಆಚರಿಸಬೇಕೆಂದೂ ಈ ವಚನದಲ್ಲಿ ಆದೇಶಿಸಲಾಗಿದೆ.

## ಝಿಹಾರ್‌ನ ಪ್ರಾಯಶ್ಚಿತ್ತ

ಪತ್ನಿಯ ಜತೆ ಜಗಳಾಡಿದರೆ ಅವರನ್ನು ತಾಯಿಗೆ ಹೋಲಿಸಿ ದಾಂಪ ಸಂಬಂಧವನ್ನು ಕಡಿಯುವ ಸಂಪ್ರದಾಯವು ಅರಬರಲ್ಲಿತ್ತು. ಅದನ್ನು 'ಝಿಹಾ ಎಂದು ಕರೆಯಲಾಗುತ್ತಿತ್ತು. ಈ ಬೇಜವಾಬ್ದಾರಿ ಕ್ರಮವನ್ನು ಕುರ್‌ಆನ್ ಉಗ್ರವ ಖಂಡಿಸಿ ಅದರಿಂದ ಮುಕ್ತವಾಗುವ ಮಾರ್ಗಗಳನ್ನು ಸೂಚಿಸಿದೆ.

"ನಿಮ್ಮ ಪೈಕಿ ತಮ್ಮ ಪತ್ನಿಯರನ್ನು 'ಝಿಹಾರ್' ಮಾಡುವವರ ಪತ್ನಿಯ ಅವರ ತಾಯಂದಿರಲ್ಲ. ಅವರನ್ನು ಹೆತ್ತವರೇ ಅವರ ತಾಯಂದಿರು. ಇವರು ಅತ್ಯ ಅಪ್ರಿಯ ಹಾಗೂ ಸುಳ್ಳು ಮಾತು ಹೇಳುತ್ತಾರೆ. ವಾಸ್ತವದಲ್ಲಿ ಅಲ್ಲಾಹನು ಬಹ ಮನ್ನಿಸುವವನೂ ಮಹಾ ಕ್ಷಮಾಶೀಲನೂ ಆಗಿರುತ್ತಾನೆ. ತಮ್ಮ ಪತ್ನಿಯರನ್ನು ಝಿಹಾ ಮಾಡಿದವರು ಅನಂತರ ತಾವು ಹೇಳಿದ ಮಾತಿನಿಂದ ಮರಳಿದರೆ, ಅವರು ಪರಸ್ಪರರ ಸ್ಪರ್ಶಿಸುವುದಕ್ಕಿಂತ ಮುಂಚೆ ಒಬ್ಬ ಗುಲಾಮನನ್ನು ವಿಮೋಚಿಸಬೇಕು.... ಯಾರಿಗಾದ ಗುಲಾಮ ಸಿಗದಿದ್ದರೆ ಅವರೀರ್ವರೂ ಪರಸ್ಪರ ಸ್ಪರ್ಶಿಸುವುದಕ್ಕಿಂತ ಮುಂಚೆ ಅವ ನಿರಂತರ 2 ತಿಂಗಳು ಉಪವಾಸ ಆಚರಿಸಬೇಕು. ಇದಕ್ಕೂ ಅಶಕ್ತನಾಗಿರುವವ ಅರುವತ್ತು ಮಂದಿ ದರಿದ್ರರಿಗೆ ಊಟ ಕೊಡಬೇಕು." (58:

ಈ ವಚನದಲ್ಲಿ ವಿವರಿಸಲಾಗಿರುವ ಝಿಹಾರ್‌ನಿಂದ ಮರಳುವ ಮೂರು ಶರತ್ತು ಪೈಕಿ ಯಾವುದಾದರೊಂದು ನಿರ್ವಹಿಸದೆ ದಾಂಪತ್ಯ ಸಂಬಂಧ ಮರುಸ್ಥಾಪನೆಯಾಗುವುದಿ

## ತ್ಯೆಯ ಪ್ರಾಯಶ್ಚಿತ್ತ

ಪ್ರಮಾದವಶಾತ್ ಸಂಭವಿಸುವ ಹತ್ಯೆಗೂ ಇದೇ ರೀತಿಯ ನಿಬಂಧನೆಗಳಿವೆ. ಸ್ಲಾಮಿ ರಾಷ್ಟ್ರದ ಓರ್ವ ಪ್ರಜೆಯು ಪ್ರಮಾದವಶಾತ್ ಇನ್ನೋರ್ವ ಪ್ರಜೆಯನ್ನು ಂದರೆ ಅದಕ್ಕೆ ಪ್ರಾಯಶ್ಚಿತ್ತವಾಗಿ ಓರ್ವ ಮುಸ್ಲಿಮ್ ಗುಲಾಮನನ್ನು ವಿಮೋಚನೆ ಳಿಸಬೇಕು ಮತ್ತು ಕೊಲೆಯಾದವರ ಸಂಬಂಧಿಕರಿಗೆ ಪರಿಹಾರ ಧನ ನೀಡಬೇಕೆಂದು ಸ್ಲಾಮ್ ನಿರ್ಣಯಿಸಿದೆ. ಅದೇ ವೇಳೆ ಹತನಾದ ವ್ಯಕ್ತಿಯು ಇಸ್ಲಾಮಿ ರಾಷ್ಟ್ರದೊಂದಿಗೆ ುದ್ಧ ನಿರತವಾಗಿರುವ ದೇಶದ ಪೌರನೆಂದಾದರೆ ಕೇವಲ ಮುಸ್ಲಿಮ್ ಗುಲಾಮನನ್ನು ಮೋಚನೆಗೊಳಿಸಿದರೆ ಸಾಕು. ಪರಿಹಾರ ಧನ ನೀಡಬೇಕಾಗಿಲ್ಲ. ಏಕೆಂದರೆ ಆತನ ತ್ತರಾಧಿಕಾರಿಗಳು ಯುದ್ಧ ನಿರತ ರಾಷ್ಟ್ರದವರಾಗಿದ್ದಾರೆ. ಇನ್ನು ಹತನಾದ ವ್ಯಕ್ತಿಯು ಸ್ಲಾಮಿ ರಾಷ್ಟ್ರದೊಂದಿಗೆ ಮೈತ್ರಿಯಲ್ಲಿರುವ ರಾಷ್ಟ್ರದ ಪೌರನೆಂದಾದರೆ, ಗುಲಾಮ ಮೋಚನೆಯೊಂದಿಗೆ ಸಂಬಂಧಿಕರಿಗೆ ಪರಿಹಾರ ಧನವನ್ನೂ ನೀಡಬೇಕು. ಹತನಾದ ಕ್ತಿಯು ಮುಸ್ಲಿಮ್ ಅಥವಾ ಅಮುಸ್ಲಿಮ್, ಸ್ತ್ರೀ ಅಥವಾ ಪುರುಷ, ಸ್ವತಂತ್ರ ಅಥವಾ ಲಾಮನೆಂಬ ವ್ಯತ್ಯಾಸಗಳು ಈ ಕಾನೂನಿಗೆ ಅಡ್ಡಿಯಾಗುವುದಿಲ್ಲ.

ತರುವಾಯ ಹೀಗೆ ಹೇಳಲಾಗಿದೆ:

**"ಸತ್ಯವಿಶ್ವಾಸಿಯೊಬ್ಬನು ಇನ್ನೊಬ್ಬ ಸತ್ಯವಿಶ್ವಾಸಿಯನ್ನು ಪ್ರಮಾದದಿಂದಾಗಿ ಹೊರತು ಧಿಸುವುದು ಸರಿಯಲ್ಲ. ಯಾರಾದರೂ ಪ್ರಮಾದವಶಾತ್ ಸತ್ಯವಿಶ್ವಾಸಿಯೊಬ್ಬನನ್ನು ವಧಿಸಿ ಟ್ಟರೆ ಅದರ ಪ್ರಾಯಶ್ಚಿತ್ತವು ಒಬ್ಬ ಸತ್ಯವಿಶ್ವಾಸಿ ವ್ಯಕ್ತಿಯನ್ನು ದಾಸ್ಯದಿಂದ ಮುಕ್ತ ಳಿಸುವುದು ಮತ್ತು ಹತ ವ್ಯಕ್ತಿಯ ವಾರೀಸುದಾರರು ಪರಿಹಾರ ಧನವನ್ನು ಕ್ಷಮಿಸದಿದ್ದರೆ ನನ್ನು ಅವರಿಗೆ ಕೊಡುವುದು. ಆದರೆ ಹತನಾದ ಈ ಮುಸ್ಲಿಮನು ನಿಮ್ಮ ಶತ್ರು ಜನಾಂಗ ವನಾಗಿದ್ದರೆ, ಅದರ ಪ್ರಾಯಶ್ಚಿತ್ತವು ಓರ್ವ ಸತ್ಯವಿಶ್ವಾಸಿ ಗುಲಾಮನನ್ನು ಮುಕ್ತ ಳಿಸುವುದು. ಅವನು ನಿಮ್ಮೊಂದಿಗೆ ಒಪ್ಪಂದ ಮಾಡಿಕೊಂಡು ಮುಸ್ಲಿಮೇತರ ಜನಾಂಗದ ಕ್ತಿಯಾಗಿದ್ದರೆ ಅವನ ವಾರೀಸುದಾರರಿಗೆ ಪರಿಹಾರಧನ ಕೊಡಲಾಗುವುದು ಮತ್ತು ಒಬ್ಬ ್ಯವಿಶ್ವಾಸಿ ವ್ಯಕ್ತಿಯನ್ನು ದಾಸ್ಯ ವಿಮೋಚನೆಗೊಳಿಸಬೇಕಾಗುವುದು. ಗುಲಾಮನನ್ನು ಪಡೆಯ ಗದವನು ನಿರಂತರ ಎರಡು ತಿಂಗಳು ಉಪವಾಸ ವ್ರತವನ್ನಾಚರಿಸಬೇಕು. ಈ ಪಾಪಕ್ಕಾಗಿ ಲ್ಲಾಹನೊಡನೆ ಪಶ್ಚಾತ್ತಾಪಪಡುವ ಕ್ರಮವಿದು. ಅಲ್ಲಾಹ್ ಸರ್ವಜ್ಞನೂ, ಯುಕ್ತಿ ರ್ಣನೂ ಆಗಿರುತ್ತಾನೆ." (ಪವಿತ್ರ ಕುರ್‌ಆನ್, 4:92)**

ಹತನಾದವನ ಪರಿಹಾರ ಧನವನ್ನು ಹಂತಕ ಅಥವಾ ಆತನ ಸಂಬಂಧಿಕರು ಡಬೇಕು. ಆದರೆ ಹಂತಕನಿಗೆ ಗುಲಾಮನನ್ನು ವಿಮೋಚಿಸುವ ಸಾಮರ್ಥ್ಯವಿಲ್ಲದಿದ್ದರೆ, ರಂತರ 2 ತಿಂಗಳು ಉಪವಾಸ ಆಚರಿಸಬೇಕು. ಏನಾದರೂ ಶರಈ ಕಾರಣಗಳಿಲ್ಲದೆ ಪವಾಸದ ನಿರಂತರತೆಯನ್ನು ಕಡಿಯಬಾರದು.[1]

1. ಉಪವಾಸ ಆಚರಿಸುವ ಸಾಮರ್ಥ್ಯವಿಲ್ಲದವನ ಕುರಿತು ಒಂದು ಅಭಿಪ್ರಾಯದ ಪ್ರಕಾರ, ಹಾರ್‌ನ ಕುರಿತು ವಿವರಿಸಿದಂತೆ, ಆತ 60 ಮಂದಿ ದರಿದ್ರರಿಗೆ ಆಹಾರ ನೀಡಬೇಕು. ಇನ್ನೊಂದು

## ಶಪಥದ ಪ್ರಾಯಶ್ಚಿತ್ತ

ಯಾವುದಾದರೂ ಕಾರ್ಯದ ದೃಢ ನಿರ್ಧಾರಕ್ಕಾಗಿ ಶಪಥ ಹಾಕಲಾಗುತ್ತದೆ. ಆ ಆ ಕಾರ್ಯವನ್ನು ನಿಜವಾಗಿಯೂ ಬಯಸಿಲ್ಲದಿದ್ದರೆ ಅದರ ಬಗೆಗಿನ ಶಪಥವು ನಿರಥ ಮತ್ತು ಅನವಶ್ಯಕವಾಗುತ್ತದೆ. ಅಂಥ ಶಪಥಗಳ ಉಲ್ಲಂಘನೆಗಾಗಿ ಅಲ್ಲಾಹ ದಂಡಿಸುವುದಿಲ್ಲ. ಆದರೆ ಉದ್ದೇಶಪೂರ್ವಕ ಮಾಡಿದ ಶಪಥವನ್ನು ಮುರಿದರೆ ಪ್ರಾಯಶಿ ನೀಡಬೇಕು. ಕುರ್‌ಆನ್ ಹೀಗೆ ಹೇಳಿದೆ, "(ಇಂತಹ ಶಪಥಗಳನ್ನು ಮುರಿದುದ **ಪ್ರಾಯಶ್ಚಿತ್ತವಾಗಿ ಹತ್ತು ಮಂದಿ ದರಿದ್ರರಿಗೆ, ನೀವು ನಿಮ್ಮ ಮಕ್ಕಳು ಮರಿಗಳಿಗೆ ಕೊ ವಂತಹ ಮಧ್ಯಮ ತರಗತಿಯ ಊಟ ಕೊಡಿರಿ ಅಥವಾ ಅವರಿಗೆ ಬಟ್ಟೆಯುಡಿಸಿರಿ ಅಥ ಒಬ್ಬ ಗುಲಾಮನನ್ನು ವಿಮೋಚನೆಗೊಳಿಸಿರಿ. ಇದಕ್ಕೆ ಬೇಕಾದ ಸಾಮರ್ಥ್ಯ ಇಲ್ಲದವ ಮೂರು ದಿನಗಳ ಉಪವಾಸ ವ್ರತವನ್ನಾಚರಿಸಬೇಕು."** (5:

ಮೇಲೆ ಸೂಚಿಸಿದ ಎಲ್ಲ ನಿಯಮಾವಳಿಗಳಲ್ಲಿಯೂ ಗುಲಾಮರ ವಿಮೋಚ ದರಿದ್ರರಿಗೆ ಆಹಾರ ಮತ್ತು ಬಟ್ಟೆ ಬರೆ ನೀಡುವುದನ್ನೂ ಬಲಿದಾನದ ಮೂಲಕ ಬಡವ ನೆರವಾಗುವುದನ್ನೂ ಕೆಲ ಸಂದರ್ಭಗಳಲ್ಲಿ ಉಪವಾಸಕ್ಕೆ ಸಮಾನ ಅಥವಾ ಪರ್ಯಾ ವೆಂದು ಪರಿಗಣಿಸಲಾಗಿದೆ.

ದೇವನೊಂದಿಗೆ ಮಾನವನ ಸಂಬಂಧವನ್ನು ಉಳಿಸಿ ಬಲಪಡಿಸುವ ನಿಟ್ಟಿ ದೈಹಿಕ ಆರಾಧನೆಗೆ ವಿಶೇಷ ಮಹತ್ವವಿದೆ. ಅದರ ಹೊರತು ಯಾರಿಗೂ ದೇವ ಸಾಮೀ ಪ್ರಾಪ್ತವಾಗಲಾರದು. ಕುರ್‌ಆನ್ ಸೃಷ್ಟಿಸೇವೆ ಮತ್ತು ಸದ್ವರ್ತತೆಯನ್ನು ಕೆಲವು ದೈ ಆರಾಧನೆಗಳ ಪರ್ಯಾಯವೆಂದು ಸಾರಿ ಅದರ ಮೂಲಕ ಲೋಪದೋಷಗಳನ್ನು ನಿವಾರಿ ಮೂಲಕ ಜನಸೇವೆಗೆ ಅತಿ ವಿಶಿಷ್ಟ ಸ್ಥಾನ ನೀಡಿದೆ.

# ಎಲ್ಲರ ಸೇ

## ಸ್ವಾರ್ಥಿಗಳು

ಎಲ್ಲ ವಿಷಯಗಳಲ್ಲಿಯೂ ಕೇವಲ ಸ್ವಹಿತಾಸಕ್ತಿಯನ್ನು ಗಮನದಲ್ಲಿರಿಸಿ ಇತ ಬಗ್ಗೆ ಯಾವುದೇ ಹಿತಾಸಕ್ತಿಯಿಲ್ಲದ ಸ್ವಾರ್ಥಿಗಳು ನಮ್ಮ ಮಧ್ಯೆ ಇದ್ದಾರೆ, ಅಂಥ ಮ ಇತರರಿಂದ ಎಲ್ಲ ರೀತಿಯ ಪ್ರಯೋಜನ ಪಡೆಯಬಯಸುತ್ತಾರೆ. ಅದೇ ವೇಳೆ ಅವರಿ ಇತರರಿಗೆ ಯಾವುದೇ ಪ್ರಯೋಜನ ಅಥವಾ ಉಪಕಾರವಾಗುವುದಿಲ್ಲ. ಇತರರ ದು

ಅಭಿಪ್ರಾಯ ಪ್ರಕಾರ, ಇಲ್ಲಿ ಕೇವಲ ಉಪವಾಸ ಆಚರಿಸಲು ಆದೇಶಿಸಲಾಗಿದೆ. ಉಪವಾಸ ಆಚರಿಸ ದವನು ಅದಕ್ಕೆ ಪರ್ಯಾಯವಾಗಿ ದರಿದ್ರರಿಗೆ ಊಟ ನೀಡಬೇಕೆಂಬುದು ಸರಿಯಲ್ಲ.

(ತಫ್ಸೀರ್ ಖಾಝಿನ್, ಬ

ಮ್ಮಾನಗಳ ಬಗ್ಗೆ ಅವರಿಗೆ ಯಾವುದೇ ಕಳವಳವಿರುವುದಿಲ್ಲ. ಇತರರಿಗೆ ಏನಾದರೂ
ನೆ ಮಾಡಬೇಕೆಂಬ ಭಾವನೆಯೂ ಅವರ ಮನಸ್ಸಿನಲ್ಲಿ ಮೂಡುವುದಿಲ್ಲ. ಒಂದು ವೇಳೆ
ದಾದರೂ ಅಂಥ ಭಾವನೆ ಮೂಡಿದರೂ ಅದರಿಂದ ತಪ್ಪಿಸಿಕೊಳ್ಳಲು ಅವರು
ಯತ್ನಿಸುತ್ತಾರೆ. ಅವರಿಗೆ ಜೀವನವೆಂದರೆ ಕೇವಲ ಸ್ವಹಿತಾಸಕ್ತಿಗಳ ಈಡೇರಿಕೆಯಾಗಿದೆ.
ವಮಾನವಿಡೀ ಅವರ ಪರಿಶ್ರಮಗಳ ಕೇಂದ್ರ ಬಿಂದು ಅದೇ ಆಗಿರುತ್ತದೆ. ಆದ್ದರಿಂದ
ಥ ಮಂದಿಯಿಂದ ಸಮಾಜವು ಹೆಚ್ಚೇನೂ ನಿರೀಕ್ಷಿಸುವಂತಿಲ್ಲ.

## ಟುಂಬದವರಿಗೆ ಸೀಮಿತ

ಹೆಚ್ಚಿನವರಲ್ಲಿ ಖಂಡಿತವಾಗಿಯೂ ಸೇವಾ ಮನೋಭಾವವಿದೆ. ಆದರೆ ಅದು ಬಹಳ
ವಲಯಕ್ಕೆ ಸೀಮಿತವಾಗಿದೆ. ಅವರಿಗೆ ತಮ್ಮಂತೆಯೇ ಅಥವಾ ಕೆಲವೊಮ್ಮೆ ತಮಗಿಂತ
ಕ್ಕಾಗಿ ತಮ್ಮ ಪತ್ನಿ, ಮಕ್ಕಳು ಮತ್ತು ಹತ್ತಿರದ ಕುಟುಂಬದ ಶ್ರೇಯೋಭಿವೃದ್ಧಿಯ
ಗ್ಗೆ ಹೆಚ್ಚಿನ ಕಾಳಜಿಯಿರುತ್ತದೆ. ಆದರೆ ಈ ಕಾಳಜಿ ಮತ್ತು ಹಿತಾಸಕ್ತಿಯೇ ವಿಶಾಲ
ಗದಲ್ಲಿ ಸೇವೆಗೆ ಅಡ್ಡಿಯಾಗುತ್ತದೆ. ಏಕೆಂದರೆ ಅವರಿಗೆ ತಮ್ಮವರ ಹಿತಾಸಕ್ತಿಯೇ
ಧಾನವಾಗಿರುತ್ತದೆ. ಅವರ ಯಶಸ್ಸಿಗಾಗಿ ಸದಾ ಚಿಂತಿಸಿ ಅವರ ಸೇವೆಗಾಗಿ ಹಗಲು
ತ್ರಿಯೆನ್ನದೆ ಅವಿಶ್ರಾಂತ ಪರಿಶ್ರಮಿಸುತ್ತಾರೆ. ಅವರ ಹೊರತು ಇತರರ ಲಾಭ-ನಷ್ಟಗಳು
ವರಿಗೆ ಸಮಸ್ಯೆಯಾಗುವುದಿಲ್ಲ. ಮಾತ್ರವಲ್ಲ, ತಮ್ಮವರ ಲಾಭಕ್ಕಾಗಿ ಇತರರಿಗೆ ನಷ್ಟ
ಷ್ಟುಂಟು ಮಾಡಲೂ ಅವರು ಹೇಸುವುದಿಲ್ಲ.

ಇಸ್ಲಾಮ್, ವ್ಯಕ್ತಿಯ ಪ್ರಾಮುಖ್ಯತೆಯನ್ನು ಕಡಿಮೆಗೊಳಿಸುವುದಿಲ್ಲ. ಅಂತೆಯೇ
ಟುಂಬ ಮತ್ತು ಗೋತ್ರವನ್ನು ನಿರ್ಲಕ್ಷಿಸುವುದಿಲ್ಲ. ಅವೆರಡರ ಹಕ್ಕು ಮತ್ತು ಕರ್ತವ್ಯ
ನ್ನು ಇಸ್ಲಾಮ್ ಸ್ಪಷ್ಟಪಡಿಸಿದೆ. ಆದರೆ ಸೇವೆ ಮತ್ತು ಸತ್ಕರ್ಮದ ಬಗ್ಗೆ ಇಸ್ಲಾಮ್
ಹಳ ವಿಶಾಲವಾದ ಕಲ್ಪನೆಯನ್ನು ಹೊಂದಿದೆ. ಮಾನವನಿಗೆ ತನ್ನ ಕುಟುಂಬದಂತೆಯೇ
ನು ಸೇರಿರುವ ಸಮಾಜದೊಂದಿಗೂ ಕೆಲವು ಕರ್ತವ್ಯಗಳಿವೆ. ಇಂಥ ಸಮಾಜದ
ರ್ಮಾಣವು ಜನತೆ ಎಂಬ ಕಲ್ಪನೆಯಿಂದ ಹುಟ್ಟುತ್ತದೆ.[1]

## ಮುದಾಯ

ಇಸ್ಲಾಮನ್ನು ಅಂಗೀಕರಿಸುವ ಎಲ್ಲ ವ್ಯಕ್ತಿಗಳೂ ಒಂದು ಸಮುದಾಯವಾಗಿದ್ದಾರೆ.
ವರ ಮಧ್ಯೆ ಧಾರ್ಮಿಕ ಐಕಮತ್ಯವಿರುವುದರಿಂದ ರಕ್ತ ಸಂಬಂಧವಿಲ್ಲದೆಯೇ ಅವರು
ಸ್ಪರ ಸಹೋದರರಾಗಿದ್ದಾರೆ. ದೇಶ-ವರ್ಣ-ವಂಶ-ಭಾಷೆಯ ವೈವಿಧ್ಯತೆಯಿರುವಂತೆಯೇ
ವರ ಪೈಕಿ ಪ್ರತಿಯೊಬ್ಬರಿಗೂ ಸ್ವಂತ ಹಕ್ಕುಗಳಿವೆ. ಅವರು ಕುಟುಂಬದವರು-ಹೊರಗಿ
ವರು, ನೆರೆಕರೆಯವರು-ದೂರದವರು, ನೌಕರರು-ಮಾಲಿಕರು, ಪರಿಚಿತರು-ಅಪರಿಚಿತರು,
ಾರೇ ಆಗಿದ್ದರೂ ಅವರ ಹಕ್ಕುಗಳನ್ನು ನಿಷೇಧಿಸಲಾಗುವುದಿಲ್ಲ. ಹಿತಾಕಾಂಕ್ಷೆ, ಪ್ರೀತಿ,

1. ಇದೇ ಗ್ರಂಥದ 'ತಪ್ಪು ಭಾವನೆಗಳ ಸುಧಾರಣೆ' ಎಂಬ ಅಧ್ಯಾಯ ನೋಡಿ.

ಸಹಾನುಭೂತಿ, ಅವಶ್ಯಕ ಸೇವೆ ಇತ್ಯಾದಿಗಳು ಈ ಹಕ್ಕುಗಳಲ್ಲಿ ಸೇರಿದೆ. ಆದರ್ಶ
ಸಹೋದರನಿಗೆ ಮಾಡುವ ಸೇವೆಯ ಪುಣ್ಯ ಮತ್ತು ಶ್ರೇಷ್ಠತೆಯನ್ನು ಹೀಗೆ ವಿವರಿಸಲಾ

"ಓರ್ವನು ಈ ಜಗತ್ತಿನಲ್ಲಿ ವಿಶ್ವಾಸಿಯ ಒಂದು ಕಷ್ಟವನ್ನು ನಿವಾರಿಸಿ
ಅಂತ್ಯದಿನದಲ್ಲಿ ಅಲ್ಲಾಹನು ಆತನ ಕಷ್ಟವನ್ನು ನಿವಾರಿಸುವನು. ಸಂಕಷ್ಟದಲ್ಲಿ
ಯಾರಿಗಾದರೂ ಸೌಲಭ್ಯ ಒದಗಿಸಿದರೆ ಉಭಯ ಲೋಕದಲ್ಲಿಯೂ ಅಲ್ಲಾಹನು ಆ
ಅನುಕೂಲ ಒದಗಿಸುತ್ತಾನೆ. ಯಾರಾದರೂ ಒಬ್ಬ ಮುಸ್ಲಿಮನ ಮಾನ ಮುಚ್ಚಿ
ಅಲ್ಲಾಹನು ಉಭಯ ಲೋಕಗಳಲ್ಲಿ ಅವನ ಮಾನ ಮುಚ್ಚುತ್ತಾನೆ. ತನ್ನ ಸಹೋದ
ನೆರವಾಗುತ್ತಿರುವ ತನಕ ಅಲ್ಲಾಹನು ತನ್ನ ದಾಸನಿಗೆ ನೆರವಾಗುತ್ತಾನೆ."

(ಮುಸ್ಲಿಮ್, ವರದಿ: ಅಬೂಹುರೈ

ಸಂಕಷ್ಟದ ವೇಳೆ ಮುಸ್ಲಿಮರು ಪರಸ್ಪರ ಮಾಡಬೇಕಾದ ಸೇವೆ ಮತ್ತು ಸಹ
ಗಳಿಗೆ ಬಹಳ ಪುಣ್ಯವಿದೆಯೆಂದು ಈ ಹದೀಸ್‌ನಲ್ಲಿ ವಿವರಿಸಲಾಗಿದೆ. ಅಂಥ ಸೇ
ಇಸ್ಲಾಮಿನಲ್ಲಿ ಬಹಳ ಮಹತ್ವ ನೀಡಲಾಗಿದೆ. ಇಡೀ ಸಮುದಾಯವು ಒಂದೇ ಶ
ದಂತೆ ಪರಸ್ಪರ ಬೆಸೆದಿರಬೇಕು. ಅದರ ಯಾವುದಾದರೊಂದು ಅಂಗದ ನೋವು
ಸಮುದಾಯದ ನೋವಾಗಿ ಮಾರ್ಪಡಬೇಕು. ಆ ನೋವಿನ ನಿವಾರಣೆಗಾಗಿ ಪ್ರಯ
ಬೇಕೆಂದು ಇಸ್ಲಾಮ್ ಬಯಸುತ್ತದೆ.

## ಸಮುದಾಯ ಸೇವೆ

ಇಂಥ ಸಮುದಾಯ ಕಲ್ಪನೆಯನ್ನು ಬೆಳೆಸುವುದರಿಂದ, ಸಮುದಾಯ ಸೇವೆ ಮ
ಶ್ರೇಯೋಭಿವೃದ್ಧಿಗೆ ಇಷ್ಟೊಂದು ಒತ್ತು ನೀಡುವುದರಿಂದ ಸಾಮುದಾಯಿಕ ಭಾವನೆಯ
ಜಾಗೃತಗೊಳಿಸಿದಂತಾಗುವುದಿಲ್ಲವೇ ಎಂಬ ಸಂಶಯ ಮೂಡಬಹುದು. ಸಾಮುದಾ
ಭಾವನೆಯು ಎಲ್ಲಿ ಬೆಳೆಯುತ್ತದೋ ಅಲ್ಲಿ ಸಮುದಾಯದ ವ್ಯಕ್ತಿತ್ವ ಮತ್ತು ಹಿತರ
ಯಿಂದ ಅವರಿಗೆ ಅತ್ಯುತ್ತಮ ಸೇವೆ ದೊರೆಯಬಹುದಾದರೂ ಸಾಮುದಾಯಿಕ ಭಾವ
ಪ್ರಾಬಲ್ಯದಿಂದ ಸಾಮುದಾಯಿಕ ಪಕ್ಷಪಾತ ಮತ್ತು ಸಂಕುಚಿತ ಮನೋಭಾವ ಬೆಳೆಯ
ಅಪಾಯವಿದೆ. ಸಾಮುದಾಯಿಕ ಭಾವನೆಗೆ ವಿಧೇಯವಾದರೆ ತಮ್ಮ ಸಮುದಾ
ಹಿತಾಸಕ್ತಿಯ ಹೊರತು ಇತರ ಸಮುದಾಯದ ಹಿತರಕ್ಷಣೆಯ ಬಗ್ಗೆ ಆಲೋಚಿಸುವುದಿ
ಮಾತ್ರವಲ್ಲ, ಅವರೊಂದಿಗಿನ ದ್ವೇಷದಿಂದ ಮನಸ್ಸು ಕಲುಷಿತವಾಗುತ್ತದೆ. ತನ್ನಿ
ವಿವಿಧ ಸಮುದಾಯಗಳ ಮಧ್ಯೆ ವಿರಸ ಹೆಚ್ಚಿ ಸ್ವಾರ್ಥ ಸಂಘರ್ಷದಿಂದ ಅವರ ಮ
ವೈರ, ವಿದ್ವೇಷದ ಗೋಡೆ ನಿರ್ಮಾಣವಾಗುತ್ತದೆ. ಆದರೆ ಇಸ್ಲಾಮ್ ಬಯ
ಸಾಮುದಾಯಿಕ ಕಲ್ಪನೆಯು ಇಂಥ ಸಾಮುದಾಯಿಕ ಭಾವನೆಯನ್ನು ಉಂಟು ಮ
ವುದಿಲ್ಲ. ಅಂತೆಯೇ ಅವುಗಳಿಗೆ ಪ್ರೋತ್ಸಾಹ ನೀಡುವುದಿಲ್ಲ.

ಇದೊಂದು ನಿರಾಧಾರ ಕಲ್ಪನೆಯಾಗಿದ್ದು ಇಸ್ಲಾಮಿನ ಸಮುದಾಯ ಕಲ್ಪ
ಅದರೊಂದಿಗೆ ದೂರದ ಸಂಬಂಧವೂ ಇಲ್ಲ. ಒಂದು ಸಮುದಾಯ ಅಥವಾ ಸಂಘಟನೆ

ಂದರ ಸದಸ್ಯರೊಡನೆ ಪರಸ್ಪರ ಸುಖ ದುಃಖಗಳಲ್ಲಿ ಭಾಗಿಯಾಗುವಂತೆ ಮತ್ತು ಪ್ರೀತಿ, ಹಾನುಭೂತಿ ಮತ್ತು ಸಹಕಾರದ ಧೋರಣೆಯನ್ನು ಕೈಗೊಳ್ಳು ವಂತೆ ಬೋಧಿಸುವುದ ಂದ ಅವರಲ್ಲಿ ಪಕ್ಷಪಾತ ಮನೋಭಾವ ಬೆಳೆಯಬಹುದೆಂಬ ಗ್ರಹಿಕೆ ಖಂಡಿತ ಉಂಟಾಗುವುದಿಲ್ಲ. ಇದು ಸ್ವಸಮುದಾಯದವದೊಂದಿಗಿನ ಹಿತಾಕಾಂಕ್ಷೆಯ ಬೇಡಿಕೆ ಯಾಗಿದೆ. ಅದು ಅದರ ನೈತಿಕ ತರಬೇತಿಯೂ ಆಗಿದೆ. ಅದಾದರೋ ತನ್ನ ಸಮುದಾಯದ ಹೊರಗಿನ ವ್ಯಕ್ತಿಗಳೊಂದಿಗೆ ಅಥವಾ ಸಮುದಾಯದೊಂದಿಗೆ ಸಹಾನು ಭೂತಿಯಿಂದ ರ್ತಿಸುವುದಕ್ಕೆ ಸರ್ವಥಾ ಅಡ್ಡಿಯಾಗುವುದಿಲ್ಲ. ತನ್ನ ಸಮುದಾಯ ಮತ್ತು ಜನತೆ ಯೊಂದಿಗೆ ನಿಷ್ಠೆ ಮತ್ತು ಸಹಾನುಭೂತಿ ಇರುವವರಿಗೆ ಮಾತ್ರ ಇಡೀ ಮಾನವ ಲದೊಂದಿಗೆ ಸಹಾನುಭೂತಿ ಮತ್ತು ಪ್ರೀತಿಯನ್ನು ಹಂಚಿಕೊಳ್ಳಲು ಸಾಧ್ಯವೆಂಬುದು ಇಸ್ಲಾಮಿನ ಧೋರಣೆಯಾಗಿದೆ. ತನ್ನ ಸಮುದಾಯಕ್ಕಾಗಿ ನೋವನುಭವಿಸುವ ಮನಸ್ಸು ಇಡೀ ಮಾನವಕುಲಕ್ಕಾಗಿ ಕಳವಳಪಡದಿರಲಾರದು.

## ಮಾನವಕುಲದ ಸೇವೆ

ಇಸ್ಲಾಮ್ ವಿಶ್ವಾಸಿಗಳನ್ನು ಅವರ ಸಮುದಾಯದೊಂದಿಗೆ ಅನುಕಂಪ ಮತ್ತು ಹಾನುಭೂತಿಯುಳ್ಳವರನ್ನಾಗಿ ಮಾಡುವ ಜತೆಗೆ ಇಡೀ ಮಾನವಕುಲದೊಂದಿಗೆ ಅನುಕಂಪ ಮತ್ತು ಸಹಾನುಭೂತಿಯಿರುವವರಾಗಿಯೂ ಮಾರ್ಪಡಿಸುತ್ತದೆ. ಪಕ್ಷಪಾತವು ಮಾನವನಿಗೆ ವೈರ ಮತ್ತು ವಿದ್ವೇಷವನ್ನು ಕಲಿಸುತ್ತದೆ. ಸಮುದಾಯ ಪಕ್ಷಪಾತಿಯಾಗಿರುವವರಿಗೆ ಅನ್ಯ ಸಮುದಾಯವನ್ನು ಪ್ರೀತಿಸಿ ಅವರೊಂದಿಗೆ ಸಹಾನುಭೂತಿಯಿಂದ ವರ್ತಿಸಲು ಎಂದೆಂದಿಗೂ ಸಾಧ್ಯವಿಲ್ಲ. ಇಸ್ಲಾಮ್ ಇಂಥ ಪಕ್ಷಪಾತವನ್ನು ಸಂಪೂರ್ಣವಾಗಿ ವಿರೋಧಿಸುತ್ತದೆ. ಅದರ ದೃಷ್ಟಿಯಲ್ಲಿ ದೇವನ ಸೃಷ್ಟಿಗಳೆಲ್ಲರೂ ಆತನ ಕುಟುಂಬ ದವರಾಗಿದ್ದಾರೆ. ದೇವನ ಕುಟುಂಬದ ಸೇವೆಯನ್ನು ಹೆಚ್ಚೆಚ್ಚು ಮಾಡಿದಂತೆಯೇ ದೇವನ ಸಂಪ್ರೀತಿ ದೊರೆಯುತ್ತದೆ. ಅನಸ್(ರ) ವರದಿ ಮಾಡಿದ ಹದೀಸ್‌ನಲ್ಲಿ ಹೀಗಿದೆ, ಸೃಷ್ಟಿಗಳೆಲ್ಲವೂ ಅಲ್ಲಾಹನ ಕುಟುಂಬವಾಗಿದೆ. ಆತನ ಕುಟುಂಬಕ್ಕೆ ಅತ್ಯಧಿಕ ಉಪಕಾರ ಮಾಡುವವರೇ ದೇವನಿಗೆ ಅತ್ಯಂತ ಪ್ರಿಯರು."

ನಿರ್ಗತಿಕರಿಗೆ, ಅನಾಥರಿಗೆ ಮತ್ತು ಜೀವನೋಪಾಯಗಳಿಂದ ವಂಚಿತರಾದವರಿಗೆ ಸೇವೆ ಮಾಡಬೇಕು ಮತ್ತು ಅವರೊಂದಿಗೆ ಉತ್ತಮವಾಗಿ ವರ್ತಿಸಬೇಕೆಂದು ಕುರ್‌ಆನ್ ಅನೇಕ ಕಡೆಗಳಲ್ಲಿ ಉಪದೇಶಿಸಿದೆ. ಹಾಗಿದ್ದರೂ ಪ್ರಸ್ತುತ ಸೇವೆಯನ್ನು ಕೇವಲ ಮುಸ್ಲಿಮರಿಗೆ ಅಥವಾ ಮಾನವರ ಒಂದು ವರ್ಗಕ್ಕೆ, ಸಂಘಟನೆಗೆ ಸೀಮಿತಗೊಳಿಸ ಬೇಕೆಂದು ಹೇಳಿಲ್ಲ. ಬದಲಾಗಿ ಆ ಸೇವೆಯು ಇಡೀ ಮಾನವಕುಲಕ್ಕೆ ದೊರೆಯ ಬೇಕೆಂದು ಇಸ್ಲಾಮ್ ಬಯಸುತ್ತದೆ. ಅದು ತನ್ನವರಾಗಲಿ ಇತರರಾಗಲಿ, ನಮ್ಮ ಆಚಾರ ನಂಬಿಕೆಯವರಾಗಲಿ, ಅವರೊಂದಿಗೆ ಭಿನ್ನಾಭಿಪ್ರಾಯವಿರುವವರಾಗಲಿ, ನಮ್ಮ ಭಾಷೆಯವರಾಗಲಿ, ಇತರ ಭಾಷೆಗಳನ್ನು ಮಾತಾಡುವವರಾಗಲಿ ಸಂಕಷ್ಟಗಳ ವೇಳೆ

ಮನುಷ್ಯ ಒಂಟಿಯಾಗಿರಲು ಬಿಡಬಾರದು. ಅವನ ಸಂಕಷ್ಟವನ್ನರಿತು ಅದನ
ದೂರೀಕರಿಸಲು ಪ್ರಯತ್ನಿಸಬೇಕು. ಈ ಕೆಳಗಿನ ಕೆಲವು ಪ್ರವಾದಿ ವಚನಗಳು
ವಾಸ್ತವಿಕತೆಯನ್ನು ಸ್ಪಷ್ಟಪಡಿಸುತ್ತದೆ. ಜರೀರ್ ಬಿನ್ ಅಬ್ದುಲ್ಲಾ ವರದಿ ಮಾಡಿದ್ದಾ

1. "ಮಾನವರೊಂದಿಗೆ ಕರುಣೆ ತೋರದವರೊಂದಿಗೆ ಅಲ್ಲಾಹನೂ ಕರು
ತೋರಿಸುವುದಿಲ್ಲ." (ಬುಖಾ

2. "ಕರುಣೆಯಿರುವವರೊಡನೆ ಕರುಣಾಳುವೂ ಕರುಣೆ ತೋರಿಸುತ್ತಾನೆ. ಆದ್ದರಿಂ
ಭೂಮಿಯಲ್ಲಿರುವವರೊಡನೆ ಕರುಣೆ ತೋರಿಸಿರಿ. ಆಕಾಶದಲ್ಲಿರುವಾತನು ನಿಮ್ಮ ಮೇ
ಕರುಣೆ ತೋರಿಸುವನು." (ತಿರ್ಮಿ

3. "ಕರುಣೆ ತೋರಿಸದಿರುವ ತನಕ ನೀವು ವಿಶ್ವಾಸಿಯಾಗಲಾರಿರಿ." ಈ ಪ್ರವಾ
ವಚನವನ್ನು ಆಲಿಸಿದಾಗ ಸಹಾಬಿಗಳು ಹೇಳಿದರು, "ನಾವೆಲ್ಲರೂ ಪರಸ್ಪರ ಕರು
ತೋರಿಸುತ್ತಿದ್ದೇವಲ್ಲವೇ?" ಪ್ರವಾದಿ(ಸ) ಉತ್ತರಿಸಿದರು, "ಇದು ನಿಮ್ಮ ಸಂಬಂಧಿ
ರೊಡನೆ ತೋರಿಸುತ್ತಿರುವ ಕರುಣೆ ಮತ್ತು ಸಹಾನುಭೂತಿಯ ಬಗ್ಗೆ ಹೇಳಿದ್ದಲ್ಲ. ಬದಲಾ
ಸಕಲ ಮಾನವರೊಡನೆ ಇರಬೇಕಾದ ಕರುಣೆ ಮತ್ತು ಸಹಾನುಭೂತಿಯಾಗಿದೆ."

(ತಬ್ರಾನಿ- ವರದಿ: ಅಬ್ದುಲ್ಲಾ ಬಿನ್ ಮಸ್‌ಊದ

4. "ಕರುಣೆ ಮತ್ತು ಸಹಾನುಭೂತಿಯಿಂದ ನತದೃಷ್ಟ ಮನಸ್ಸು ಮಾ
ಬರಿದಾಗಿರುತ್ತದೆ." (ಮುಸ್ನದ್ ಅಹ್ಮದ್, ತಿರ್ಮಿದಿ: ವರದಿ ಅಬೂಹುರೈರ

ಒಮ್ಮೆ ಪ್ರವಾದಿಯವರು(ಸ) ಕೆಲವು ಮಂದಿ ಕುಳಿತಿದ್ದ ಸ್ಥಳಕ್ಕೆ ಬಂದು ಕೇಳಿದ
"ನಿಮ್ಮ ಪೈಕಿ ಯಾರು ಒಳ್ಳೆಯವರು ಮತ್ತು ಯಾರು ಕೆಟ್ಟವರೆಂದರು ನಾನು ತಿಳಿಸಲೇ
ಜನರು ಮೌನ ವಹಿಸಿದರು. ಪ್ರವಾದಿ(ಸ) ಇದೇ ಪ್ರಶ್ನೆಯನ್ನು ಮೂರು ಬ
ಪುನರಾವರ್ತಿಸಿದರು. ಆಗ ಒಬ್ಬರು ಹೇಳಿದರು- ಅಲ್ಲಾಹನ ಸಂದೇಶವಾಹಕರೇ! ಹೇಳಿ
ನಮ್ಮಲ್ಲಿ ಒಳ್ಳೆಯವರು ಯಾರು ಕೆಟ್ಟವರು ಯಾರು? ಪ್ರವಾದಿ(ಸ) ಹೀಗೆ ಉತ್ತರಿಸಿದ
"ನಿಮ್ಮ ಪೈಕಿ ಯಾರಿಂದ ಜನರು ಒಳಿತನ್ನು ನಿರೀಕ್ಷಿಸಿ, ಕೆಡುಕಿನಿಂದ ಸುರಕ್ಷಿತರ
ರುವರೋ ಅವರೇ ಒಳ್ಳೆಯವರು. ಹಾಗೆಯೇ ಯಾರಿಂದ ಒಳಿತಿನ ನಿರೀಕ್ಷೆಯಿಲ್ಲವೆ
ಮತ್ತು ಜನರು ಕೆಡುಕಿನಿಂದ ಸುರಕ್ಷಿತರಲ್ಲವೋ ಆ ಮಂದಿಯೇ ಕೆಟ್ಟವರು."

(ಅಬೂಹುರೈರಾ, ವರದಿ: ಮುಸ್ನದ್ ಅಹ್ಮದ

ಮೇಲಿನ ಎಲ್ಲ ವಚನಗಳಲ್ಲಿಯೂ ವರ್ಗಭೇದವಿಲ್ಲದೆ ದೇವನ ಎಲ್ಲ ಸೃ
ಗಳೊಂದಿಗೂ ಉತ್ತಮವಾಗಿ ವರ್ತಿಸಬೇಕೆಂದು ಆದೇಶಿಸಲಾಗಿದೆ. ತಮ್ಮ ಸಹಾ
ಸಹಾನುಭೂತಿ ಅಗತ್ಯವಿರುವ ಎಲ್ಲರಿಗೂ ನೆರವಾಗಬೇಕಾದುದು ಪ್ರತಿಯೊಬ್ಬರ ಕರ್ತ
ವೆಂದು ಈ ಪ್ರವಾದಿ ವಚನ ನೆನಪಿಸುತ್ತದೆ. ಈ ವಿಷಯದಲ್ಲಿ ಮಾನವರನ್ನು ಪಂ
ಗಳಾಗಿ ವಿಂಗಡಿಸಿ ಸ್ವಧರ್ಮೀಯರು ಮತ್ತು ಇತರರು, ತನ್ನವರು-ಪರಕೀಯರು, ಪರಿಚಿತ
ಅಪರಿಚಿತರು ಎಂಬಿತ್ಯಾದಿ ಭಿನ್ನತೆಯನ್ನು ಕಲ್ಪಿಸುವುದು, ಒಂದು ವಿಭಾಗವನ್ನು ಸೇವ
ಅರ್ಹರು ಮತ್ತು ಇನ್ನೊಂದು ವರ್ಗವನ್ನು ಅನರ್ಹರೆಂದು ಪರಿಗಣಿಸುವುದು ಇಸ್ಲಾಮಿ

ಸ್ವಭಾವಕ್ಕೆ ತೀರಾ ವಿರುದ್ಧವಾಗಿದೆ. ಸೇವೆಯಲ್ಲಿ ಇಂಥ ವರ್ಗಭೇದಕ್ಕೆ ಯಾವ ಮರ್ಥನೆಯೂ ಇಲ್ಲ.

ಜನಸೇವೆಯು ದಿನ ರಾತ್ರಿಗಳ ಆರಾಧನೆಗಳಿಗೆ ಸಮಾನವಾಗಿದ್ದು ಮಾನವನನ್ನು ದೇವ ಸಂಪ್ರೀತಿಗೆ ಪಾತ್ರಗೊಳಿಸುತ್ತದೆ. ಸಂಕುಚಿತತೆ, ವೈರ ವಿದ್ವೇಷ ಇತ್ಯಾದಿ ದುರ್ಗುಣಗಳನ್ನು ತೊಲಗಿಸಿ ಉತ್ತಮ ಸಮಾಜದ ಉತ್ತಮ ಪೌರನಾಗಿ ಮಾಡುತ್ತದೆ. ಹೀಗಿರುತ್ತಾ, ಜನಸೇವೆಯ ಪ್ರಾಧಾನ್ಯವನ್ನು ಓರ್ವ ಮುಸ್ಲಿಮನಿಂದ ನಿರಾಕರಿಸಲು ಹೇಗೆ ತಾನೇ ಸಾಧ್ಯ? ಆದ್ದರಿಂದಲೇ ಇಸ್ಲಾಮ್ ಧರ್ಮವು ಸೇವೆಗೆ ಇಷ್ಟೊಂದು ಮಹತ್ವ ಮತ್ತು ಪ್ರೋತ್ಸಾಹ ನೀಡಿದೆ.

## ಸೇವೆಗೆ ಅರ್ಹರಾದವರು

ಸಮಾಜದಲ್ಲಿ ಸೇವೆಗೆ ಅರ್ಹರಾದ ಪ್ರತಿಯೊಬ್ಬರಿಗೂ ಅದನ್ನು ಒದಗಿಸಬೇಕೆಂದು ಇಸ್ಲಾಮ್ ವಿವರವಾಗಿ ತಿಳಿಸಿದೆ. ಯಾರು ಸೇವೆ ಮತ್ತು ಸದ್ವರ್ತನೆಗೆ ಅರ್ಹರು ಮತ್ತು ಹಕ್ಕುದಾರರೆಂಬುದನ್ನು ಇಸ್ಲಾಮ್ ಕಲಿಸಿದೆ. ತಂದೆ, ತಾಯಿ, ಸಂತಾನ ಮತ್ತು ಕುಟುಂಬ ದವರೊಂದಿಗಿನ ಮಾನವನಿಗೆ ಸಹಜವಾಗಿ ಪ್ರೀತಿಯಿರುತ್ತದೆ. ಅವರೊಂದಿಗೆ ಮಾನವನು ಒಂದು ರೀತಿಯ ಹಾರ್ದಿಕ ಸಂಬಂಧವನ್ನು ಹೊಂದಿರುತ್ತಾನೆ. ಆದ್ದರಿಂದ ಅವರ ಸೇವೆಯನ್ನು ತನ್ನ ನೈತಿಕ ಕರ್ತವ್ಯವೆಂದು ಆತನು ತಿಳಿಯುತ್ತಾನೆ. ಆದರೆ ಸಮಾಜದ ಇತರ ವ್ಯಕ್ತಿಗಳೊಡನೆ ಇಂಥ ಒಂದು ಭಾವನಾತ್ಮಕ ಸಂಬಂಧವಿಲ್ಲದಿರುವುದರಿಂದ ಅವರ ಬಗ್ಗೆ ಆತನ ಧೋರಣೆಯು ಭಿನ್ನವಾಗಿರುತ್ತದೆ. ಇಸ್ಲಾಮ್, ಮನುಷ್ಯರೊಂದಿಗಿನ ಸಂಬಂಧದ ಸ್ವಭಾವ ಮತ್ತು ಅದರ ಪದವಿಗಳನ್ನು ಸಂಪೂರ್ಣವಾಗಿ ಪರಿಗಣಿಸಿ ಪ್ರತಿಯೊಬ್ಬರ ಹಕ್ಕುಗಳನ್ನು ನಿರ್ಣಯಿಸುತ್ತದೆ. ರಕ್ತ ಸಂಬಂಧಿಕರ ಸೇವೆಯು ಸ್ವತಃ ನೈತಿಕ ಕರ್ತವ್ಯ ವೆಂದು ಗ್ರಹಿಸುವುದರೊಂದಿಗೆ ರಕ್ತಸಂಬಂಧ ಅಥವಾ ಇತರ ರೀತಿಯ ಸಂಬಂಧವಿಲ್ಲ ದವರೊಡನೆಯೂ ಉತ್ತಮ ರೀತಿಯಿಂದ ವರ್ತಿಸಬೇಕು, ಅವರ ಸೇವೆಯನ್ನು ಮಾಡ ಬೇಕೆಂದು ಇಸ್ಲಾಮ್ ಕಲಿಸುತ್ತದೆ. ಆತನ ಸೇವೆ ಮತ್ತು ಸದ್ವರ್ತನೆಯ ವೃತ್ತವು ತಮ್ಮ ಮನೆ ಮತ್ತು ಕುಟುಂಬವನ್ನು ಮೀರಿ ಇಡೀ ಸಮೂಹಕ್ಕೆ ವ್ಯಾಪಿಸಬೇಕೆಂದು ಇಸ್ಲಾಮ್ ಬಯಸುತ್ತದೆ. ಸಕಲ ಮಾನವ ಕುಲವನ್ನು ಸ್ವಂತ ಕುಟುಂಬವೆಂದು ಪರಿಗಣಿಸಿ ಅವರ ಸೇವೆಗಾಗಿ ಕಾರ್ಯನಿರತವಾಗುವ ಒಂದು ಜೀವನವನ್ನು ಇಸ್ಲಾಮ್ ಸಂಕಲ್ಪಿಸಿದೆ. ಸೇವೆ ಮತ್ತು ಸದ್ವರ್ತನೆಗೆ ಯಾರೆಲ್ಲ ಅರ್ಹರು, ಹಕ್ಕುದಾರರು ಮತ್ತು ನಿರ್ಲಕ್ಷಿಸಲ್ಪಡಬಾರದವ ರೆಂದು ಪವಿತ್ರ ಕುರ್‌ಆನ್ ವಿವರಿಸಿದೆ, "ನೀವೆಲ್ಲರೂ ಅಲ್ಲಾಹನ ದಾಸ್ಯ-ಆರಾಧನೆ ಮಾಡಿರಿ. ಅವನೊಂದಿಗೆ ಯಾರನ್ನೂ ಸಹಭಾಗಿಯನ್ನಾಗಿ ಮಾಡಬೇಡಿರಿ. ಮಾತಾಪಿತ ರೊಂದಿಗೆ ಸೌಜನ್ಯದಿಂದ ವರ್ತಿಸಿರಿ. ಸಂಬಂಧಿಕರೊಂದಿಗೂ ಅನಾಥರೊಂದಿಗೂ ನಿರ್ಗತಿಕ ರೊಂದಿಗೂ ಆಪ್ತರಾದ ನೆರೆಹೊರೆಯವರೊಂದಿಗೂ ಅಪರಿಚಿತ ನೆರೆಹೊರೆಯುವ ರೊಂದಿಗೂ ಅನುಚರರೊಂದಿಗೂ ಪ್ರಯಾಣಿಕರೊಂದಿಗೂ ನಿಮ್ಮ ಅಧೀನದಲ್ಲಿರುವ

ದಾಸ - ದಾಸಿಯರೊಂದಿಗೂ ಉತ್ತಮ ರೀತಿಯಿಂದ ವರ್ತಿಸಿರಿ. ದುರಹಂಕಾರ ಹೊಂದಿರು ಗರ್ವಿಷ್ಠನನ್ನೂ ಆತ್ಮ ಸ್ತುತಿಗೈಯುವವನನ್ನೂ ಅಲ್ಲಾಹನು ಮೆಚ್ಚುವುದಿಲ್ಲ."

(ಪವಿತ್ರ ಕುರ್‌ಆನ್, 4:3

ಸೇವೆ ಮತ್ತು ಸಹಾಯ ಮಾಡಲು ಕರೆ ನೀಡಿರುವ ಸಮಾಜದ ಎಲ್ಲ ದುರ್ಬ ವರ್ಗವನ್ನು ಈ ಕುರ್‌ಆನ್ ವಚನದಲ್ಲಿ ಪ್ರಸ್ತಾಪಿಸಲಾಗಿಲ್ಲ. ಆದರೆ ದುರ್ಬ ವರ್ಗದೊಂದಿಗಿನ ಅನುಕಂಪ ಮತ್ತು ಪ್ರೀತಿ ತುಂಬಿದ ಕುರ್‌ಆನಿನ ಸಾಮಾನ್ಯ ಧೋರ ಯನ್ನು ಈ ವಚನದಿಂದ ಸರಿಯಾಗಿ ತಿಳಿಯಬಹುದು. ಈ ವಚನವನ್ನು ವಿವರಿಸುವುದಕ್ಕಿಂ ಮುಂಚೆ ಇಲ್ಲಿ ಸೇವೆಗೆ ಕುರ್‌ಆನ್ ಬಳಸಿರುವ 'ಇಹ್ಸಾನ್' ಎಂಬ ಪದವು ಗಮನಾರ್ಹವಾಗಿ 'ಇಹ್ಸಾನ್' ಎಂಬ ಪದವು ಸೇವೆಯ ಎಲ್ಲ ರಂಗಗಳನ್ನು ಸಮಗ್ರವಾಗಿ ಒಳಗೊಂಡಿ ಮನಸ್ಸನ್ನು ಸಾಂತ್ವನಗೊಳಿಸುವ ಪ್ರೀತಿ, ಅವಶ್ಯಕತೆಗಳ ಈಡೇರಿಕೆ, ಅರ್ಹವಾಗಿರುವು ಕ್ಕಿಂತ ಹೆಚ್ಚು ನೀಡುವುದು ಎಂಬಿತ್ಯಾದಿ ಅರ್ಥಗಳೂ ಇಹ್ಸಾನ್‌ನಲ್ಲಿ ಸೇರಿದೆ.

## ತಂದೆ-ತಾಯಂದಿರು

ಮೇಲಿನ ವಚನದಲ್ಲಿ ದೇವಾರಾಧನೆಯ ಕರೆಯ ಬಳಿಕ ಮಾನವರೊಂದಿಗೆ ಉತ್ತ ರೀತಿಯಲ್ಲಿ ವರ್ತಿಸಬೇಕೆಂದು ಹೇಳಲಾಗಿದೆ. ಈ ನಿಟ್ಟಿನಲ್ಲಿ ಪ್ರಪ್ರಥಮವಾಗಿ ತಂದೆ ತಾ ಯರನ್ನು ಪ್ರಸ್ತಾಪಿಸಲಾಗಿದೆ.

**"ಮಾತಾಪಿತರೊಂದಿಗೆ ಸೌಜನ್ಯದಿಂದ ವರ್ತಿಸಿರಿ." (ಪವಿತ್ರ ಕುರ್‌ಆನ್, 4:36**

ತಂದೆ ತಾಯಿಯರ ಸೇವೆ ಮಾಡಬೇಕೆಂಬುದು ಜಗತ್ತಿನ ಎಲ್ಲ ಧರ್ಮಗಳ ಮೂ ಶಿಕ್ಷಣವಾಗಿದೆ. ಕುರ್‌ಆನ್ ಅನೇಕಾರು ಕಡೆಗಳಲ್ಲಿ ಅಲ್ಲಾಹನಿಗೆ ಇಬಾದತ್ ಮಾಡಿರಿ ಎಂ ಹೇಳಿದ ಕೂಡಲೇ ತಂದೆತಾಯಿಯರೊಡನೆ ಉತ್ತಮ ರೀತಿಯಲ್ಲಿ ವರ್ತಿಸಿರೆಂದು ಆದೇಶಿಸಿ ಮಾನವರ ಮೇಲೆ ಅತಿ ಹೆಚ್ಚು ಉಪಕಾರ ದೇವನದ್ದಾಗಿದೆ. ಅನಂತರ ತಂದೆ ತಾಯಿಯ ದ್ದೆಂದು ಇದು ಸೂಚಿಸುತ್ತದೆ. ಮಾನವನ ಅಸ್ತಿತ್ವ, ಉಳಿವು, ಜನನ, ಪರಿಪಾಲನೆ, ಸಂಸ್ಕರ ಶಿಕ್ಷಣ, ನೈತಿಕ, ಆರ್ಥಿಕ ಪ್ರಗತಿ ಇತ್ಯಾದಿಗಳಲ್ಲಿ ತಂದೆ ತಾಯಿಗಳ ಪ್ರಮುಖ ಪಾತ್ರವಾಗಿ ಅವರ ಸಂಪೂರ್ಣ ಗಮನ ಮತ್ತು ಪರಿಪಾಲನೆ ದೊರೆಯದಿದ್ದರೆ ಮಾನವನ ಪ್ರಗತಿಯ ತಟಸ್ಥವಾಗುವುದಲ್ಲದೆ, ಆತನ ಅಸ್ತಿತ್ವವೇ ಹಲವೊಮ್ಮೆ ಗಂಡಾಂತರಕ್ಕೆ ಸಿಲುಕುತ್ತದೆ. ಅತ್ಯಂ ಅಜ್ಞಾನಿ ಹಾಗೂ ಬಡವರಾದ ತಂದೆ ತಾಯಂದಿರು ತಮ್ಮ ಮಕ್ಕಳಿಗಾಗಿ ಮಾಡುವ ಉಪಕಾರ ಈ ಲೋಕದಲ್ಲಿ ಸಾಟಿಯಿಲ್ಲ. ಇದರಲ್ಲಿ ಅಲ್ಲಾಹನ ಉಪಕಾರದ ಛಾಯೆ ಕಾಣುತ್ತ ಅಲ್ಲಾಹನ ಇಬಾದತ್ ವಾಸ್ತವದಲ್ಲಿ ಆತನ ಅನುಗ್ರಹಗಳಿಗೆ ಕೃತಜ್ಞತಾರ್ಪಣೆಯಾಗಿ ತಂದೆ ತಾಯಂದಿರಿಗೆ ದಿವ್ಯತ್ವದ ಪದವಿಯಿಲ್ಲದಿರುವುದರಿಂದ ಅವರಿಗೆ ಇಬಾದತ್ ಮಾಡು ಪ್ರಶ್ನೆಯೇ ಉದ್ಭವಿಸುವುದಿಲ್ಲ. ಆದರೂ ಅವರೊಂದಿಗೆ ಸದ್ವರ್ತನೆ ಕಡ್ಡಾಯ. ಅದುವ ಅವರ ಉಪಕಾರಗಳಿಗೆ ಕೃತಜ್ಞತೆಯಾಗಿದೆ. ಅಲ್ಲಾಹನಿಗೆ ಕೃತಜ್ಞತೆ ತೋರುವಂತೆಯೇ ತಂ ತಾಯಿಗಳಿಗೂ ಕೃತಜ್ಞತೆ ತೋರಬೇಕೆಂದು ಕುರ್‌ಆನ್ ಆದೇಶಿಸುತ್ತದೆ.

"ನನಗೆ ಕೃತಜ್ಞತೆ ಸಲ್ಲಿಸು ಮತ್ತು ನಿನ್ನ ಮಾತಾಪಿತರಿಗೆ ಕೃತಜ್ಞತೆ ಸಲ್ಲಿಸು. ನೀನು ನನ್ನ ತೆಗೇ ಮರಳಬೇಕಾಗಿದೆ (ಎಂದು ಉಪದೇಶಿಸಿದೆವು)." (ಪವಿತ್ರ ಕುರ್‌ಆನ್, 31:14)

ಆಧುನಿಕ ಸಂಸ್ಕೃತಿಯ ಪ್ರಭಾವದಿಂದ ಇಂದು ಕುಟುಂಬ ವ್ಯವಸ್ಥೆಯೇ ಅಸ್ತವ್ಯಸ್ತ ೂಂಡಿದೆ. ಕುಟುಂಬ ವ್ಯವಸ್ಥೆಯ ಅನೇಕ ಮೌಲ್ಯಗಳು ಇಂದು ಕುಸಿಯುತ್ತಿವೆ. ಈ ತನದ ದುರಂತವನ್ನು ವೃದ್ಧ ತಂದೆ ತಾಯಿಯರು ಹೆಚ್ಚಾಗಿ ಅನುಭವಿಸಬೇಕಾಗುತ್ತದೆ. ೀವಲ ನಿರರ್ಥಕ ವೆಚ್ಚಗಳಿಗೆ ಕಾರಣವಾಗುವ 60-70 ವಯಸ್ಸು ದಾಟಿದ ವಯೋ ೃದ್ಧರನ್ನು ಜೀವನ ವಲಯದಿಂದ ಹೊರಗೆಸೆಯುವ ಬಗ್ಗೆ ನವನಾಗರಿಕತೆಯ ವಕ್ತಾರರು ಂದು ಗಂಭೀರ ಚರ್ಚೆ ನಡೆಸುತ್ತಿದ್ದಾರೆ. ತಮ್ಮ ರಕ್ತ, ಮಜ್ಜೆ ಮತ್ತು ಹೃದಯವನ್ನು ೀಡಿ, ಒಂದೊಮ್ಮೆ ಸಾಕಿ ಸಲಹಿ ಜೀವನ ರಂಗದಲ್ಲಿ ಸ್ಪರ್ಧಿಸಿ ಮುನ್ನಡೆಯಲು ನಮ್ಮನ್ನು ರ್ಹಗೊಳಿಸಿದ ತಂದೆತಾಯಿಯರ ಬಗ್ಗೆ ಹೊಸ ಪೀಳಿಗೆಯು ಈ ರೀತಿ ಆಲೋಚಿಸುತ್ತಿದೆ ಂಬುದು ದುರಂತ. ಆದ್ದರಿಂದ ತಂದೆ ತಾಯಂದಿರಿಗೆ ವಿಶೇಷತಃ ವಾರ್ಧಕ್ಯ ಕಾಲದಲ್ಲಿ ತ ಬಯಸಲು ಕುರ್‌ಆನ್ ವಿಶೇಷವಾಗಿ ಆಜ್ಞಾಪಿಸಿರುವ ಪ್ರಾಮುಖ್ಯತೆ ಇಲ್ಲಿ ನಮಗೆ ನವರಿಕೆಯಾದೀತು.

"ಮಾತಾಪಿತರೊಡನೆ ಸೌಜನ್ಯದಿಂದ ವರ್ತಿಸಿರಿ. ಅವರ ಪೈಕಿ ಒಬ್ಬರು ಅಥವಾ ವರಿಬ್ಬರೂ ವೃದ್ಧರಾಗಿ ನಿಮ್ಮ ಬಳಿಯಲ್ಲಿದ್ದರೆ, ಅವರ ಬಗ್ಗೆ ಚಕಾರವೆತ್ತಬೇಡಿರಿ ಮತ್ತು ವರನ್ನು ಜರೆಯಬೇಡಿರಿ. ಅವರೊಂದಿಗೆ ಗೌರವಪೂರ್ವಕವಾಗಿ ಮಾತನಾಡಿರಿ. ನಯ ನಯ ಮತ್ತು ಕರುಣೆಯೊಂದಿಗೆ ಅವರ ಮುಂದೆ ಬಾಗಿಕೊಂಡಿರಿ. 'ಓ ನನ್ನ ಪ್ರಭೂ! ವರು ನನ್ನ ಚಿಕ್ಕಂದಿನಲ್ಲಿ ದಯಾ ವಾತ್ಸಲ್ಯಗಳಿಂದ ನನ್ನನ್ನು ಸಾಕಿದಂತೆಯೇ ನೀನು ಅವರ ೇಲೆ ಕೃಪೆತೋರು' ಎಂದು ಪ್ರಾರ್ಥಿಸಿರಿ." (ಪವಿತ್ರ ಕುರ್‌ಆನ್, 17:23-24)

## ಂಬಂಧಿಕರು

ತಂದೆ ತಾಯಿಯರ ಬೆನ್ನಲ್ಲೇ ಕುರ್‌ಆನ್ ಆಪ್ತ ಸಂಬಂಧಿಕರ ಬಗ್ಗೆ ಪ್ರಸ್ತಾಪಿಸಿದೆ. ಂದೆ ತಾಯಿಯರ ಬಳಿಕ ಅವರ ಹಕ್ಕು ಪ್ರಧಾನವಾಗಿದೆ. ಈ ಸಂಬಂಧವು ತಂದೆ ಾಯಿಯರಿಂದಲೇ ಹುಟ್ಟುತ್ತದೆ. ಸಂಬಂಧವು ನಿಕಟವಾಗಿರುವಂತೆಯೇ ಅವರ ಹಕ್ಕುಗಳೂ ೆಚ್ಚುತ್ತದೆ. ಆಪ್ತ ಸಂಬಂಧಿಕರೊಡನೆ ಸದ್ವರ್ತನೆಯೇ ಕುಟುಂಬದೊಂದಿಗೆ ಉತ್ತಮ ೀತಿಯಲ್ಲಿ ವರ್ತಿಸಿರಿ ಎಂಬ ಆದೇಶದ ಬೇಡಿಕೆಯಾಗಿದೆ. ಕುರ್‌ಆನ್ ಅದಕ್ಕೆ ವಿಶೇಷ ತ್ತು ನೀಡುತ್ತದೆ. ಕುರ್‌ಆನ್ ದೇವಭಕ್ತರನ್ನು ಒಂದೆಡೆ ಹೀಗೆ ವರ್ಣಿಸಿದೆ,

"ಅಲ್ಲಾಹನು ಯಾವ ಯಾವ ಸಂಬಂಧಗಳನ್ನು ಕಾಪಾಡಲು ಆಜ್ಞೆಕೊಟ್ಟಿರುವನೋ ವುಗಳನ್ನು ಕಾಪಾಡಿಕೊಳ್ಳುತ್ತಾರೆ. ತಮ್ಮ ಪ್ರಭುವನ್ನು ಭಯಪಡುತ್ತಾರೆ. ಎಲ್ಲಾದರೂ ಮ್ಮೊಡನೆ ಕೆಟ್ಟ ರೀತಿಯ ವಿಚಾರಣೆ ನಡೆದುಬಿಟ್ಟೀತೋ ಎಂದು ಹೆದರುತ್ತಾರೆ."

(ಪವಿತ್ರ ಕುರ್‌ಆನ್, 13:21)

ಕುಟುಂಬ ಸಂಬಂಧವನ್ನು ಜೋಡಿಸುವುದರಿಂದ ಕೌಟುಂಬಿಕ ಜೀವನ ಸಂತೋಷಪ್ರದ ಮತ್ತು ಸಂತುಷ್ಟವಾಗುತ್ತದೆ. ಎಲ್ಲಿ ಈ ಗುಣಗಳಿಲ್ಲವೋ ಅಲ್ಲಿ ಜಗ ವಿರಸ ಅನಿವಾರ್ಯ. ಆದ್ದರಿಂದಲೇ ಕುಟುಂಬ ಸಂಬಂಧವನ್ನು ಜೋಡಿಸುವುದಕ್ಕೆ ಭಾ ಪ್ರತಿಫಲವಿದೆ ಮತ್ತು ಅದು ಪುಣ್ಯದಾಯಕವೆಂದು ಇಸ್ಲಾಮ್ ಕಲಿಸಿದೆ. ಪ್ರವಾದಿಯವ ಹೇಳಿದ್ದಾರೆ, 'ಓರ್ವ ನಿರ್ಗತಿಕನಿಗೆ ದಾನ ಮಾಡಿದರೆ ಅದು ಕೇವಲ ದಾನವಾಗಿದೆ. ಅದ ವೇಳೆ ಈ ದಾನವು ಕುಟುಂಬದಲ್ಲಿರುವ ನಿರ್ಗತಿಕನಿಗೆಂದಾದರೆ ಅದು ಏಕಕಾಲದ ದಾನವೂ ಕುಟುಂಬ ಸಂಬಂಧ ಬಲಪಡಿಸುವುದೂ ಆಗುತ್ತದೆ.' (ತಿರ್ಮಿ

ಕುಟುಂಬದ ಸೇವೆಗೆ ಇಮ್ಮಡಿ ಪ್ರತಿಫಲವಿದೆಯೆಂದು ಈ ಹದೀಸ್ ಸ್ಪ ಪಡಿಸುತ್ತದೆ. ಒಂದು ಲೆಕ್ಕದಲ್ಲಿ ಇದು ಇತರ ದಾನಗಳಂತೆಯೇ ಒಂದು ದಾನವಾಗಿ ಇನ್ನೊಂದು ಲೆಕ್ಕದಲ್ಲಿ ಇದು ಸಂಬಂಧಿಕರೊಂದಿಗಿನ ಸದ್ವರ್ತನೆಯು ಕುಟುಂಬ ಸಂಬಂಧ ಜೋಡಣೆಯೂ ಆಗಿದೆ. ಕುಟುಂಬದ ಜತೆಗಿನ ಮಾನವನ ನಿಕಟತೆ ಮತ್ತು ಸಂಬಂಧ ನೈಸರ್ಗಿಕವಾಗಿದೆ. ಅದೇ ವೇಳೆ ಕೆಲವು ಕುಟುಂಬ ಸಂಬಂಧಗಳು ಬಹಳ ಕೋಮ ಮತ್ತು ಮೃದುವಾಗಿರುವುದು. ಕ್ಷುಲ್ಲಕ ಸಮಸ್ಯೆಗಳೂ ಕುಟುಂಬ ಸಂಬಂಧದ ಶಿಥಿಲತೆ ಕಾರಣವಾಗುತ್ತದೆ. ಆದ್ದರಿಂದ ಸಂಬಂಧ ಮುರಿಯದಂತೆ ಎಚ್ಚರ ವಹಿಸಬೇಕು. ಕಾರ ವಶಾತ್ ಮುರಿದು ಬಿಟ್ಟರೆ ಮರುಸ್ಥಾಪನೆಗಾಗಿ ಎಲ್ಲ ಪ್ರಯತ್ನಗಳನ್ನೂ ನಡೆಸಬೇಕೆಂಬು ಹದೀಸ್‌ನಲ್ಲಿ ಹೇಳಲಾಗಿದೆ. ಸದ್ವರ್ತನೆಯು ಅದರ ಉತ್ತಮ ರೂಪವಾಗಿದೆ. ಇಬ ಉಮರ್ ವರದಿ ಮಾಡಿದ ಒಂದು ಪ್ರವಾದಿ ವಚನದಲ್ಲಿ ಹೀಗಿದೆ, 'ವಾಸ್ತವದ ಕುಟುಂಬ ಸಂಬಂಧವನ್ನು ಜೋಡಿಸುವಾತನು ಪ್ರತ್ಯುಪಕಾರ ಮಾಡುವವನಲ್ಲ. ಬದಲಾ ಕಡಿದು ಹೋದ ಸಂಬಂಧವನ್ನು ಮರಳಿ ಸ್ಥಾಪಿಸುವಾತನೇ ನಿಜವಾಗಿಯೂ ಕುಟುಂ ಸಂಬಂಧವನ್ನು ಜೋಡಿಸುವವನು.' (ಬುಖಾರಿ) ಅಬೂಹುರೈರಾ ವರದಿ ಮಾಡಿದ್ದಾ 'ಓರ್ವರು ಪ್ರವಾದಿವರ್ಯರೊಂದಿಗೆ ಹೀಗೆ ನಿವೇದಿಸಿದರು. ನನ್ನ ಕೆಲವು ಕುಟುಂ ಗಳೊಂದಿಗೆ ನಾನು ಸಂಬಂಧವಿರಿಸುತ್ತೇನೆ. ಅವರಾದರೋ ನನ್ನೊಂದಿಗೆ ಸಂಬಂ ಕಡಿಯುತ್ತಾರೆ. ನಾನು ಅವರ ಜತೆ ಗೌರವದಿಂದ ವರ್ತಿಸುತ್ತೇನೆ. ಅವರು ಕೆಟ್ಟ ರೀತಿಯ ವರ್ತಿಸುತ್ತಾರೆ. ನಾನು ತಾಳ್ಮೆ ವಹಿಸುತ್ತೇನೆ. ಅವರು ನನ್ನೊಡನೆ ಅವಿವೇಕದಿಂ ವರ್ತಿಸುತ್ತಾರೆ.' ಪ್ರವಾದಿ(ಸ) ಹೇಳಿದರು, 'ನೀನು ಈ ರೀತಿಯಲ್ಲಿ ವರ್ತಿಸುತ್ತಿದ್ದರೆ ಅ ಅವರ ಮುಖಕ್ಕೆ ನೀನು ಬಿಸಿ ಬೂದಿ ಹಾಕಿದಂತೆ. ಆದ್ದರಿಂದ ಆ ಧೋರಣೆಯನ್ನು ನೀ ಮುಂದುವರಿಸುವ ತನಕ ಅಲ್ಲಾಹನ ವತಿಯಿಂದ ಓರ್ವ ಸಹಾಯಕನು ಸದಾ ನಿ ಜತೆಯಲ್ಲಿರುತ್ತಾನೆ.' (ಮುಸ್ಲಿಮ

## ಅನಾಥರೊಂದಿಗೆ ಸದ್ವರ್ತನೆ

ತಂದೆ ತಾಯಂದಿರು ಮತ್ತು ಕುಟುಂಬದವರ ಹಕ್ಕುಗಳು ಎಲ್ಲಕ್ಕಿಂತ ಮಿಗಿಲಾಗಿ ಅವರೊಂದಿಗೆ ಉತ್ತಮವಾಗಿ ವರ್ತಿಸಬೇಕೆಂದು ಆಜ್ಞಾಪಿಸಿದ ಬಳಿಕ ಸಮಾಜದ ಇ

ರ್ಬಲ ವರ್ಗಗಳ ಹಕ್ಕುಗಳ ಕಡೆಗೂ ಕುರ್‌ಆನ್ ಗಮನ ಹರಿಸುತ್ತದೆ. ಅವರಲ್ಲಿ ತ್ಯಂತ ದುರ್ಬಲವಾಗಿರುವ ಅನಾಥರು ಮತ್ತು ನಿರ್ಗತಿಕರನ್ನು ಮೊದಲು ಪ್ರಸ್ತಾಪಿಸಿದೆ. ನಾಥರು ಮತ್ತು ನಿರ್ಗತಿಕರೊಡನೆ ಉತ್ತಮ ರೀತಿಯಲ್ಲಿ ವರ್ತಿಸಿರಿ'

ಎಳೆ ಪ್ರಾಯದಲ್ಲಿಯೇ ತಂದೆಯ ಆಶ್ರಯ ದೊರೆಯದೆ ಅವರ ಪ್ರೀತಿ, ಪರಿಪಾಲನೆ ಂಚಿತ ಮಕ್ಕಳ ಶಿಕ್ಷಣ, ಪೋಷಣೆ ಮತ್ತು ತರಬೇತಿಯು ಸಮಾಜದ ಭದ್ರತೆ ಮತ್ತು ರ್ಥಿಕ ಪ್ರಗತಿಗೆ ಅತ್ಯಾವಶ್ಯಕವಾಗಿದೆ. ಆದ್ದರಿಂದ ಅವರ ಹಕ್ಕುಗಳನ್ನು ಈಡೇರಿಸಿ, ವರ ಅನಾಥ ಭಾವನೆಯನ್ನು ತೊಲಗಿಸುವುದು ಸಮಾಜದ ಕರ್ತವ್ಯವಾಗಿದೆ. ಈ ಷಯದಲ್ಲಿರುವ ಸಣ್ಣ ಅಸಡ್ಡೆಯೂ ಅನಾಥರ ದೈಹಿಕ ಬೆಳವಣಿಗೆಯನ್ನು ಮಾತ್ರವಲ್ಲ, ಚಾರಿಕ ಮತ್ತು ಮಾನಸಿಕ ಬೆಳವಣಿಗೆಯನ್ನೂ ಪೀಡಿಸುತ್ತದೆ. ಅನಾಥರ ಹಕ್ಕುಗಳನ್ನು ರ್ಲಕ್ಷಿಸುವ ಕರುಣೆಯಿಲ್ಲದ ಸಂಕುಚಿತ ಸಮಾಜದ ವಿರುದ್ಧ ಭವಿಷ್ಯದಲ್ಲಿ ಅವರ ನದಲ್ಲಿ ಬಂಡಾಯ ಭಾವನೆ ಬೆಳೆದರೆ ಅಚ್ಚರಿಯಿಲ್ಲ. ಸಮಾಜದ ಪರಿಗಣನೆ ದೊರೆತರೆ ತ್ತಮ ಪೌರರಾಗಿ ಬೆಳೆಯುವ ಈ ಅನಾಥ ಬಾಲಕರು, ಅದು ನಿರಾಕರಿಸಲ್ಪಟ್ಟಾಗ ಮಾಜಕ್ಕೆ ಅಪಾಯಕಾರಿಗಳಾಗಿ ಪರಿಣಮಿಸುವುದು ಕಂಡು ಬರುತ್ತದೆ. ಆದ್ದರಿಂದ ನಾಥರ ಪರಿಪಾಲನೆ, ಸಂರಕ್ಷಣೆ, ಶಿಕ್ಷಣ, ತರಬೇತಿ, ಹಕ್ಕುಗಳ ಪೂರೈಕೆ ಇತ್ಯಾದಿಗಳಿಗೆ ರ್‌ಆನ್ ಮತ್ತು ಹದೀಸ್‌ನಲ್ಲಿ ಬಹಳ ಪ್ರಾಮುಖ್ಯತೆ ನೀಡಲಾಗಿದೆ. ಆ ಬಗ್ಗೆ ದೇಪದೇ ಹೇಳಲಾಗಿದೆ:

ಅಬೂಹುರೈರಾ ಹೇಳುತ್ತಾರೆ: ಅನಾಥರ ಸಂರಕ್ಷಕ ತನ್ನವರನ್ನಾಗಿರಲಿ ಅಥವಾ ತರರನ್ನಾಗಿರಲಿ ಸ್ವರ್ಗದಲ್ಲಿ ಹೀಗೆ ಮತ್ತು ನಾನು ಈ ಹದೀಸ್‌ನ ವರದಿಗಾರ ಮಾಲಿಕ್‌ರು ನ್ನ ತೋರ್ಬೆರಳು ಮತ್ತು ಮಧ್ಯದ ಬೆರಳನ್ನು ತೋರಿಸಿದರು. ನನ್ನ ಈ ಎರಡು ರಳುಗಳಷ್ಟು ನಿಕಟರಾಗಿರುತ್ತೇವೆ." ಎಂದು ಪ್ರವಾದಿ(ಸ) ಹೇಳಿದ್ದಾರೆ. (ಮುಸ್ಲಿಮ್)

ದೌರ್ಬಲ್ಯ ಮತ್ತು ಅಜ್ಞಾನದಿಂದಾಗಿ ಹಲವೊಮ್ಮೆ ತಮ್ಮ ನ್ಯಾಯೋಚಿತ ಹಕ್ಕುಗಳನ್ನು ಂರಕ್ಷಿಸಲಾರದಷ್ಟು ಅಶಕ್ತರಾಗಿರುತ್ತಾರೆ. ಆದ್ದರಿಂದ ಅವರ ಹಕ್ಕುಗಳನ್ನು ಕಬಳಿಸಲು ಯಾರಿಗೂ ಬಹಳ ಸುಲಭ. ಅಂಥವರಿಗೆ ಕುರ್‌ಆನ್ ಕಟುಭಾಷೆಯಲ್ಲಿ ಎಚ್ಚರಿಕೆ ನೀಡಿದೆ.

"ಅನಾಥರ ಸಂಪತ್ತನ್ನು ಅನ್ಯಾಯವಾಗಿ ಕಬಳಿಸುವವರು ತಮ್ಮ ಹೊಟ್ಟೆಯಲ್ಲಿ ಗ್ನಿಯನ್ನು ತುಂಬಿಸುತ್ತಾರೆ. ಖಂಡಿತವಾಗಿಯೂ ಅವರನ್ನು ಪ್ರಜ್ವಲಿಸುವ ನರಕಕ್ಕೆ ಸೆಯಲಾಗುವುದು." (ಪವಿತ್ರ ಕುರ್‌ಆನ್, 4:10)

ಅನಾಥರ ಸಂರಕ್ಷಣೆ ಮತ್ತು ಪೋಷಣೆ ಮಾತ್ರವೇ ಇಸ್ಲಾಮಿನ ಕಲ್ಪನೆಯಾಗಿರದೆ ವರನ್ನು ದೇವಭಕ್ತ ಸಜ್ಜನರಾಗಿ ಬೆಳೆಸಲಿಕ್ಕಾಗಿ ಅವಶ್ಯಕ ಸೇವೆ-ಸಹಾಯಗಳನ್ನು ಒದಗಿಸ ೇಕಾದುದೂ ಸಮಾಜದ ಕರ್ತವ್ಯವಾಗಿದೆ. ಕೇವಲ ಇಸ್ಲಾಮೀ ಕಲ್ಪನೆಯಿಂದ ಮಾತ್ರ ನಾಥರು ಸಮಾಜಕ್ಕೆ ಒಂದು ಭಾರವಾಗುವ ಬದಲಾಗಿ ಅನುಗ್ರಹ ಮತ್ತು ಬಂಡವಾಳವಾಗಿ ಾರ್ಪಡಬಹುದು.

## ಬಡವರೊಂದಿಗೆ ಸದ್ವರ್ತನೆ

ಅನಾಥರಂತೆಯೇ ಬಡವರ ಬಗ್ಗೆಯೂ ಗಮನ ಹರಿಸಲಾಗಿದೆ. ಆರ್ಥಿಕ ಮತ ದೈಹಿಕ ತಾಪತ್ರಯಗಳಿಂದ ಮೂಲಭೂತ ಅವಶ್ಯಕತೆಗಳನ್ನು ಈಡೇರಿಸಲಾಗದವ ಬಡವರು. ಜೀವನೋಪಾಯಕ್ಕೆ ಅಡ್ಡಿಯುಂಟಾಗಿ ಮಾನವರನ್ನು ಆರ್ಥಿಕ ಬಿಕ್ಕಟ್ಟಿ ಸಿಲುಕಿಸುವಂತಹ ದೈಹಿಕ ಮತ್ತು ಆರ್ಥಿಕ ಸಂಕಷ್ಟಗಳನ್ನು ಅನುಭವಿಸುವವರ ಜೀವ ವಶ್ಯಕತೆಗಳನ್ನು ಪೂರೈಸಿ ಅವರ ಆರ್ಥಿಕ ಭದ್ರತೆಗಾಗಿ ಎಲ್ಲ ರೀತಿಯ ಸೌಲಭ್ಯಗಳನ ಅವರಿಗೆ ಒದಗಿಸಬೇಕೆಂದು ಇಸ್ಲಾಮ್ ಅಪೇಕ್ಷಿಸುತ್ತದೆ. ಈ ಧ್ಯೇಯದಿಂದಲೇ ಬಡ ದರಿದ್ರರೊಡನೆ ಸೌಜನ್ಯದಿಂದ ವರ್ತಿಸಬೇಕು. ಅವರ ನ್ಯಾಯೋಚಿತ ಹಕ್ಕುಗಳನ ಸಂರಕ್ಷಿಸಬೇಕೆಂದೂ ಅವರೊಂದಿಗೆ ಉತ್ತಮವಾಗಿ ವರ್ತಿಸಬೇಕೆಂದೂ ಕುರ್‌ಆನ್ ಮತ ಪ್ರವಾದಿ ಚರ್ಯೆಯು ಪದೇಪದೇ ಎಚ್ಚರಿಸುತ್ತಿದೆ. "ಆದುದರಿಂದ (ಸತ್ಯವಿಶ್ವಾಸಿಗಳೇ **ಸಂಬಂಧಿಕನಿಗೆ ಅವನ ಹಕ್ಕನ್ನು ಕೊಡು ಮತ್ತು ದರಿದ್ರನಿಗೂ ಪ್ರಯಾಣಿಕನಿಗೂ (ಅವನವ ಹಕ್ಕನ್ನು ಕೊಡು) ಅಲ್ಲಾಹನ ಸಂಪ್ರೀತಿಯನ್ನು ಬಯಸುವವರಿಗೆ ಈ ಕ್ರಮ ಉತ್ತಮ ವಾಗಿದೆ ಮತ್ತು ಅವರೇ ಯಶಸ್ವಿಗಳಾಗುವವರು."** (ಪವಿತ್ರ ಕುರ್‌ಆನ್, 30:38

ಇಂದು ಸಾಮಾನ್ಯವಾಗಿ ಭಿಕ್ಷುಕರನ್ನು ಬಡವರೆಂದು ಭಾವಿಸಲಾಗುತ್ತದೆ. ಆದ ಭಿಕ್ಷಾಟನೆಯು ಹಲವೊಮ್ಮೆ ಅನಿವಾರ್ಯ ಪರಿಸ್ಥಿತಿ ಅಥವಾ ಗತಿಗೆಟ್ಟ ಜೀವನ ಮಟ್ಟ ಸಂಕೇತವಲ್ಲ. ಭಿಕ್ಷಾಟನೆಯು ಅಭ್ಯಾಸವಾಗಿ ಬಿಟ್ಟವರು ಯಾವುದೇ ಅನಿವಾರ್ಯ ಪರಿಸ್ಥಿ ಯಿಲ್ಲದಿದ್ದರೂ ಭಿಕ್ಷೆ ಬೇಡುತ್ತಿರಬಹುದು. ವಾಸ್ತವದಲ್ಲಿ ಅವರು ಬಡವರಲ್ಲ. ಬಡವರೆಂ ನಟನೆ ಮಾಡುವವರು. ಬದಲಾಗಿ ಅನಿವಾರ್ಯ ಪರಿಸ್ಥಿತಿಯ ತೀವ್ರ ಒತ್ತಡವಿದ್ದರ ಯಾರ ಮುಂದೆಯೂ ಸ್ವಾಭಿಮಾನದಿಂದ ಕೈಚಾಚದವರೇ ವಾಸ್ತವದಲ್ಲಿ ಬಡವರು. ಅಂ ಮಂದಿಯನ್ನು ಗುರುತಿಸಿ ನೆರವಾಗಬೇಕೆಂದು ಕುರ್‌ಆನ್ ಬೋಧಿಸಿದೆ. ವಿಶೇಷವಾ ಧಾರ್ಮಿಕ ಚಟುವಟಿಕೆಗಳಲ್ಲಿ ನಿರತರಾಗಿ, ಆರ್ಥಿಕ ಸ್ಪರ್ಧೆಯಲ್ಲಿ ಭಾಗವಹಿಸುವ ಅವಕಾ ವಿಲ್ಲದವರು ಸಮಾಜದ ಗಮನಕ್ಕೆ ಹೆಚ್ಚು ಅರ್ಹರಾಗಿದ್ದಾರೆ. ಅವರ ಕುರಿತು ಕುರ್‌ಆನ ಹೀಗೆಂದಿದೆ, **"ಅರಿವಿಲ್ಲದವನು ಅವರ ಸ್ವಾಭಿಮಾನವನ್ನು ಕಂಡು ಅವರು ಸ್ಥಿತಿವಂತರಾ ದ್ದಾರೆಂದೇ ಊಹಿಸುತ್ತಾನೆ. ನೀವು ಅವರ ಮುಖಭಾವಗಳಿಂದ ಅವರ ಆಂತರಿಕ ಸ್ಥಿತಿಯನ ತಿಳಿದುಕೊಳ್ಳಬಲ್ಲಿರಿ. ಆದರೆ, ಅವರು ಜನರ ಬೆಂಬತ್ತಿ ಬೇಡುವವರಲ್ಲ."**

(ಪವಿತ್ರ ಕುರ್‌ಆನ್, 2:273

ಒಂದು ಪ್ರವಾದಿ ವಚನದಲ್ಲಿ ಈ ವಿಷಯವನ್ನು ಮತ್ತಷ್ಟು ಸ್ಪಷ್ಟಪಡಿಸಲಾಗಿದ "ಒಂದೆರಡು ತುತ್ತು ಅನ್ನ ಅಥವಾ ಉತ್ತುತ್ತೆಗಾಗಿ ಕೈಚಾಚಿ ಜನರ ಹಿಂದೆ ಅಲೆಯುವವ ಬಡವರಲ್ಲ. ಬದಲಾಗಿ ಮೂಲ ಜೀವನಾವಶ್ಯಕತೆಗಳನ್ನು ಪೂರೈಸುವ ಸಾಮರ್ಥ್ಯವಿಲ್ಲದಿದ್ದರ ಅದು ಯಾರಿಗೂ ತಿಳಿಯದಂತೆ ಜೀವನ ಸಾಗಿಸುವವರೇ ನೈಜ ಬಡವರು. ಅವ ಯಾರೊಂದಿಗೂ ಯಾಚಿಸುವುದಿಲ್ಲ." (ಬುಖಾರಿ-ಮುಸ್ಲಿಮ್, ವರದಿ: ಅಬೂಹುರೈರಾ

ಸಮಾಜದ ಇಂಥ ಆತ್ಮಾಭಿಮಾನವಿರುವ ಬಡವರೇ ವಾಸ್ತವದಲ್ಲಿ ಸಹಾಯಕ್ಕೆ
ಟ್ಟ ಅರ್ಹರು.

## ಕರೆಯುವರೊಂದಿಗೆ ಸದ್ವರ್ತನೆ

ನೆರೆಕರೆಯವರ ಸೇವೆ ಮತ್ತು ಅವರೊಂದಿಗೆ ಉತ್ತಮವಾಗಿ ವರ್ತಿಸಲು ಕುರ್‌ಆನ್
ನೀಡುತ್ತದೆ, "ಸಂಬಂಧಿಕರೊಂದಿಗೂ ಅನಾಥರೊಂದಿಗೂ ನಿರ್ಗತಿಕರೊಂದಿಗೂ
ರಾದ ನೆರೆಹೊರೆಯವರೊಂದಿಗೂ ಅಪರಿಚಿತ ನೆರೆಹೊರೆಯವರೊಂದಿಗೂ ಅನುಚರ
ಂದಿಗೂ ಪ್ರಯಾಣಿಕರೊಂದಿಗೂ ನಿಮ್ಮ ಅಧೀನದಲ್ಲಿರುವ ದಾಸ-ದಾಸಿಯರೊಂದಿಗೂ
ಮ ರೀತಿಯಿಂದ ವರ್ತಿಸಿರಿ." (ಪವಿತ್ರ ಕುರ್‌ಆನ್, 4:36)

ಪರಿಸರ ವಾಸಿಗಳನ್ನು ತನ್ನ ಸಾಮಾಜಿಕ ಜೀವನದಿಂದ ದೂರವಿರಿಸಲು ಮಾನವನಿಗೆ
ಶಿತ ಸಾಧ್ಯವಿಲ್ಲ. ಆದ್ದರಿಂದ ಅವರಿಗೆ ಕೆಲವು ಹಕ್ಕುಗಳನ್ನು ಇಸ್ಲಾಮ್ ನೀಡುತ್ತದೆ.
ಇತರರಿಗಿಂತ ಹೆಚ್ಚಿದೆ. ಮೇಲಿನ ಕುರ್‌ಆನ್ ವಚನದಲ್ಲಿ ನೆರೆಕರೆಯವರನ್ನು
ರು ವಿಭಾಗಗಳಾಗಿ ವಿಂಗಡಿಸಲಾಗಿದೆ. 1) ಸಂಬಂಧಿಕರಾದ ನೆರೆಕರೆಯವರು 2) ಕೇವಲ
ರೆಯ ಸಂಬಂಧವಿರುವವರು 3) ಪ್ರಯಾಣ, ಶಾಲೆ, ಕಾಲೇಜು, ಕಛೇರಿ ಫ್ಯಾಕ್ಟರಿ,
ಸಾರ ಇತ್ಯಾದಿಗಳಲ್ಲಿ ತಾತ್ಕಾಲಿಕವಾಗಿ ಭೇಟಿಯಾಗುವವರು. ಈ ಮೂರನೆಯ
ಗವನ್ನು ಒಂದು ರೀತಿಯ ನೆರೆಕರೆಯವರೆಂದು ಇಸ್ಲಾಮ್ ಪರಿಗಣಿಸುತ್ತದೆ. ನೆರೆಕರೆ
ರೊಂದಿಗೆ ಉತ್ತಮ ರೀತಿಯಲ್ಲಿ ವರ್ತಿಸಬೇಕಾದ ಪ್ರಾಮುಖ್ಯತೆಯನ್ನು ಜಗತ್ತಿನ
ಧರ್ಮಗಳೂ ಒತ್ತಿ ಹೇಳಿವೆ. ಆದರೆ ಈ ವಿಷಯದಲ್ಲಿ ಇಸ್ಲಾಮಿನಷ್ಟು ವಿಶಾಲವಾದ
ತೆಯನ್ನು ಬೇರೆ ಧರ್ಮಗಳು ಹೊಂದಿಲ್ಲ. ಯಾವುದೇ ಅಲ್ಪ ಕಾಲಾವಧಿಗೆ ಪರಸ್ಪರ
ವಾಸದಲ್ಲಿರುವವರಿಗೂ ಇಸ್ಲಾಮ್ ಹಕ್ಕುಗಳನ್ನು ಖಾತ್ರಿಪಡಿಸಿದೆ. ಈ ಸಹವಾಸವು
ಗೊಂಡರೆ ಅವರ ಹಕ್ಕುಗಳೂ ಹೆಚ್ಚುತ್ತವೆ. ಆಯಿಷಾ ಮತ್ತು ಇಬ್ನು ಉಮರ್ ವರದಿ
ಸಿದ ಪ್ರವಾದಿ ವಚನದಲ್ಲಿ ಹೀಗಿದೆ.

"ವಾರೀಸು ಸೊತ್ತಿನಲ್ಲಿ ಪಾಲು ನಿರ್ಣಯಿಸಲಾದೀತೇ ಎಂದು ಭಾಸವಾಗುವಷ್ಟರ
ಟ್ಟಿಗೆ ನೆರೆಕರೆಯವರೊಡನೆ ಉತ್ತಮ ರೀತಿಯಲ್ಲಿ ವರ್ತಿಸಬೇಕೆಂದು ಜಿಬ್ರೀಲ್
ಪದೇ ನನಗೆ ತಾಕೀತು ಮಾಡಿದ್ದರು." (ಬುಖಾರಿ, ಮುಸ್ಲಿಮ್)

ನೆರೆಕರೆಯವರಿಗೆ ತೊಂದರೆ ಕೊಡಬಾರದು. ಮಾತ್ರವಲ್ಲ, ಅಗತ್ಯ ಬಿದ್ದರೆ ಅವರಿಗೆ
ಕ ಮತ್ತು ನೈತಿಕ ನೆರವು ನೀಡಬೇಕೆಂಬುದು ಇಸ್ಲಾಮಿನ ಬೇಡಿಕೆಯಾಗಿದೆ. ನಾನು
ಕಾಂಕ್ಷಿಗಳ ಮಧ್ಯೆ ಬಾಳುತ್ತಿರುವುದರಿಂದ ನನಗೆ ಕಷ್ಟಕೋಟಲೆಗಳನ್ನು ಅನುಭವಿಸ
ದ ಪ್ರಸಂಗ ಬರಬಾರದೆಂಬ ಸಮಾಧಾನ ಮತ್ತು ಖಾತ್ರಿಯು ಸಮಾಜದ ಪ್ರತಿಯೊಬ್ಬ
ನಲ್ಲಿಯೂ ರೂಢಮೂಲವಾಗುವ ರೀತಿಯಲ್ಲಿ ಆದರಣೀಯ ಧೋರಣೆಯನ್ನು
ರೆಯವರ ಬಗ್ಗೆ ಹೊಂದಿರಬೇಕೆಂಬ ಕಲ್ಪನೆಯನ್ನು ಇಸ್ಲಾಮ್ ಎತ್ತಿ ಹಿಡಿಯುತ್ತದೆ.
ರೆಯವರ ಸುಖ ದುಃಖಗಳಲ್ಲಿ ಭಾಗಿಯಾಗಿ ಅತ್ಯವಶ್ಯಕ ಹಂತಗಳಲ್ಲಿ ಅವರ ನೆರವಿಗೆ

ಸಹೋದರರಂತೆ ಧಾವಿಸುವುದೇ ಈ ಕಲ್ಪನೆಯ ಅನಿವಾರ್ಯ ಬೇಡಿಕೆಯಾಗಿದೆ. ನೆ
ಯವರಿಗೆ ಸಂಬಂಧಿಸಿದ ಇಸ್ಲಾಮಿನ ಈ ವಿಶಾಲ ಕಲ್ಪನೆಯನ್ನು ಈ ಕೆಳಗಿನ ಪ್ರ
ವಚನವು ದೃಢೀಕರಿಸುತ್ತದೆ.

ಹ.ಅಬೂ ಸಯೀದ್ ಖುದ್ರಿಯಿ ಹೇಳುತ್ತಾರೆ, "ಅಲ್ಲಾಹನಾಣೆ! ವಿಶ್ವಾಸಿಯಲ್ಲ"ವೆಂದು ಪ್ರವಾದಿಯವರು ಮೂರು ಬಾರಿ ಹೇಳಿದರು. ಅದು ಯ
ಎಂದು ವಿಚಾರಿಸಿದಾಗ ಪ್ರವಾದಿ ಹೇಳಿದರು, "ನೆರೆಕರೆಯವರನ್ನು ಪೀಡಿಸುವಾತ."
(ಬುಖಾರಿ, ಮುಸ್ಲಿ

ನೆರೆಕರೆಯವರಿಗೆ ತೊಂದರೆ ಕೊಡುವುದು ವಿಶ್ವಾಸಕ್ಕೆ ವಿರುದ್ಧವೆಂದು ಈ ಹದಿ
ಘೋಷಿಸುತ್ತದೆ. "ಹಸಿದ ನೆರೆಯಾತನ ಮುಂದೆ ಹೊಟ್ಟೆ ತುಂಬಿಸಿ ನಡೆಯುವಾ
ವಿಶ್ವಾಸಿಯಲ್ಲ" (ಮಿಶ್ಕಾತ್) ಎಂದು ಇನ್ನೊಂದು ವಚನದಲ್ಲಿ ಉದ್ಧರಿಸಲಾ
ನೆರೆಯಾತನಿಗೆ ತನ್ನಿಂದಾಗಿ ಶಾಂತಿ ಮತ್ತು ನೆಮ್ಮದಿ ನೀಡಿ, ಅವರ ದುಃಖ-ದುಮ
ಗಳಲ್ಲಿ ಭಾಗವಹಿಸುವುದು ವಿಶ್ವಾಸವನ್ನು ಗುರುತಿಸುವ ಉಪಾಧಿಯೆಂದು ಈ ಪ್ರ
ವಚನಗಳಿಂದ ತಿಳಿಯುತ್ತದೆ.

## ಯಾತ್ರಿಕರೊಂದಿಗೆ ಸದ್ವರ್ತನೆ

ಸೇವೆಗೆ ಅರ್ಹರಾಗಿ ಇಸ್ಲಾಮ್ ಯಾತ್ರಿಕರನ್ನೂ ಪರಿಗಣಿಸಿದೆ. ಯಾತ್ರಿಕರ ಸೇವೆಯ
ಎಲ್ಲ ಕಾಲಗಳಲ್ಲಿಯೂ ಶ್ರೇಷ್ಠ ಪುಣ್ಯ ಕರ್ಮವೆಂದು ತಿಳಿಯಲಾಗಿತ್ತು. ಅವರಿ
ತಂಗುದಾಣಗಳನ್ನು ನಿರ್ಮಿಸಿ ವಿಶ್ರಾಂತಿಯ ಸೌಲಭ್ಯಗಳನ್ನು ಒದಗಿಸಲಾಗುತ್ತಿತ್ತು. ಆ
ಇಂದು ಅಂಥ ಸೇವಾ ಮನೋಭಾವ ಮಾಯವಾಗುತ್ತಿದೆ. ಇಂದು ಯಾತ್ರಿಕರ ಸರಳ ಸೆ
ವ್ಯವಸ್ಥೆಯ ಸ್ಥಾನವನ್ನು ಗಗನ ಚುಂಬಿ ಕಟ್ಟಡಗಳು ಸ್ವಾಧೀನಪಡಿಸಿವೆ. ಅವುಗಳ ಪ್ರಯೋ
ಪಡೆಯಲು ಎಲ್ಲರಿಗೂ ಸಾಧ್ಯವಿಲ್ಲ. ಮಾತ್ರವಲ್ಲ, ಯಾತ್ರಿಕರ ಎಲ್ಲ ಸಮಸ್ಯೆಗಳೂ
ಮೂಲಕ ಬಗೆಹರಿಸಲ್ಪಡುವುದಿಲ್ಲ. ಖರ್ಚು ವೆಚ್ಚಕ್ಕೆ ಸಾಕಷ್ಟು ಹಣವಿಲ್ಲದಿರುವುದು, ಆರೋ
ಕೆಡುವುದು, ಆಹಾರ ಮತ್ತು ವಾಸ ಸೌಲಭ್ಯ ದೊರೆಯದಿರುವುದು ಇತ್ಯಾದಿ ಅನೇಕ ಸಮಸ್ಯೆ
ಸಾಮಾನ್ಯವಾಗಿ ಊರಿನಿಂದ ದೂರ ಪ್ರಯಾಣಿಸುವಾಗ ಯಾತ್ರಿಕರಿಗೆ ಅನುಭವವಾಗು
ಈ ಅಂಶವನ್ನು ಗಮನಿಸಿದರೆ, ಈ ಕಾಲದಲ್ಲಿ ಯಾತ್ರಿಕರ ಸಮಸ್ಯೆಗಳು ಹಿಂದಿ
ಜಟಿಲವಾಗಿದೆ. ಅಂಥ ಎಲ್ಲ ಸಂದರ್ಭಗಳಲ್ಲಿಯೂ ಯಾತ್ರಿಕರೊಂದಿಗೆ ಅತ್ಯು
ಧೋರಣೆಯನ್ನು ಅಂಗೀಕರಿಸಬೇಕಾದುದು ಇಡೀ ಸಮಾಜದ ಕರ್ತವ್ಯವೆಂದು ಇಸ್ಲಾ
ಕಲಿಸುತ್ತದೆ. ಇನ್ನು ಪ್ರಯಾಣವು ಹೊರದೇಶಗಳಿಗಾದರೆ ಅಂತಾರಾಷ್ಟ್ರೀಯ ನಿಯವ
ಪ್ರಕಾರ ಇನ್ನೂ ಅನೇಕ ಸಂಕಷ್ಟಗಳನ್ನೆದುರಿಸಬೇಕಾಗುತ್ತದೆ. ಯಾತ್ರಿಕರಿಗೆ ಪರಕೀಯ
ಯುಂಟಾಗದಿರಲಿಕ್ಕಾಗಿ ಮತ್ತು ತಾವು ಮನೆ ಬಿಟ್ಟು ಬಂದ ಉದ್ದೇಶವನ್ನು ಈಡೇ
ವುದಕ್ಕೆ ಯಾತ್ರಾ ವೈಷಮ್ಯಗಳು ಅಡ್ಡಿಯಾಗದಿರಲಿಕ್ಕಾಗಿ ಯಾತ್ರಿಕರೊಂದಿಗೆ ಉ
ಧೋರಣೆಯನ್ನು ಕೈಗೊಳ್ಳಬೇಕೆಂಬುದು ಸಮಾಜದೊಂದಿಗೆ ಇಸ್ಲಾಮಿನ ಬೇಡಿಕೆಯಾಗಿ

## ಾಮರು ಮತ್ತು ಸೇವಕರೊಂದಿಗೆ ಸದ್ವರ್ತನೆ

ಗುಲಾಮರು ಮತ್ತು ಸೇವಕರು ಸೇವೆ ಮತ್ತು ಸದ್ವರ್ತನೆಗೆ ಅರ್ಹವಾಗಿರುವ ಟ್ಟೊಂದು ವರ್ಗವಾಗಿದ್ದಾರೆ. "ಗುಲಾಮರೊಡನೆ ಉತ್ತಮ ರೀತಿಯಲ್ಲಿ ವರ್ತಿಸಿರಿ ದು ಕುರ್‌ಆನ್ ಆದೇಶಿಸಿದೆ." (ಪವಿತ್ರ ಕುರ್‌ಆನ್, 4:36)

ಕುರ್‌ಆನ್ ಅವತೀರ್ಣವಾಗುವುದಕ್ಕಿಂತ ಶತಮಾನಗಳ ಹಿಂದೆಯೇ ಗುಲಾಮ ಪ್ರದಾಯವು ಜಗತ್ತಿನಲ್ಲಿ ರೂಢಿಯಲ್ಲಿತ್ತು. ಅವರೊಂದಿಗೆ ಪ್ರಾಣಿಗಳಂತೆ ಕೆಟ್ಟ ಯಲ್ಲಿ ವರ್ತಿಸಲಾಗುತ್ತಿತ್ತು. ಅವರು ಯಾವ ಹಕ್ಕಿಗೂ ಅರ್ಹರಾಗಿರಲಿಲ್ಲ. ಈ ಾಮ ಸಂಪ್ರದಾಯವನ್ನು ಇಸ್ಲಾಮ್, ಹಂತಹಂತವಾಗಿ ಅಳಿಸಬಯಸಿತು. ಅದಕ್ಕಾಗಿ ಲಾಮ್ ಅಂಗೀಕರಿಸಿದ ಕ್ರಮಗಳ ಚರ್ಚೆಗೆ ಇಲ್ಲಿ ಅವಕಾಶವಿಲ್ಲ. ಗುಲಾಮತನ ರ್ಮೂಲನದ ಪ್ರಾಥಮಿಕ ಕ್ರಮವೆಂಬ ನೆಲೆಯಲ್ಲಿ ಇಸ್ಲಾಮ್ ಅವರ ಹಕ್ಕುಗಳನ್ನು ಾಯಿಸಿ, ಅವರೊಂದಿಗೆ ಉತ್ತಮ ರೀತಿಯಲ್ಲಿ ವರ್ತಿಸಬೇಕೆಂದು ಒತ್ತಿ ಹೇಳಿದೆಯೆಂಬ ತ್ತವಿಕತೆಯನ್ನು ಸ್ಪಷ್ಟಪಡಿಸುವುದೇ ಇಲ್ಲಿ ಉದ್ದೇಶವಾಗಿದೆ. ಈ ವಿಷಯದಲ್ಲಿ ಬಂದಿರುವ ೇಕ ಪ್ರವಾದಿ ವಚನಗಳ ಪೈಕಿ ಒಂದನ್ನು ಮಾತ್ರ ಇಲ್ಲಿ ಉದ್ಧರಿಸುತ್ತೇನೆ.

ಹ. ಅಬೂದರ್‌ರಿಂದ ವರದಿ: "ಅಲ್ಲಾಹನು ನಿಮ್ಮ ಒಡೆತನಕ್ಕೆ ಕೊಟ್ಟ ಗುಲಾಮರು ್ಮ ಸಹೋದರರಾಗಿದ್ದಾರೆ. ಆದ್ದರಿಂದ ನೀವು ಉಣ್ಣುವುದನ್ನು ಅವರಿಗೆ ಉಣ್ಣಿಸಿರಿ. ು ತೊಡುವುದನ್ನು ಅವರಿಗೆ ತೊಡಿಸಿರಿ. ಅವರ ಸಾಮರ್ಥ್ಯಕ್ಕೆ ಮೀರಿದ ಹೊರೆಯನ್ನು ರ ಮೇಲೆ ಹೇರಬೇಡಿರಿ. ಹಾಗೆ ಮಾಡುವುದಿದ್ದರೆ ಆ ಕಾರ್ಯದಲ್ಲಿ ನೀವೂ ಅವರಿಗೆ ವಾಗಿರಿ." (ಬುಖಾರಿ)

ಸೇವೆ ಮತ್ತು ಸದ್ವರ್ತನೆಗೆ ಅರ್ಹರಾದ ಎಲ್ಲ ವ್ಯಕ್ತಿಗಳನ್ನೂ ವರ್ಗಗಳನ್ನೂ ್ರಪಿಸಿದ ಬಳಿಕ ಕೊನೆಗೆ ಕುರ್‌ಆನ್ ಹೇಳುತ್ತದೆ.

**"ದುರಹಂಕಾರ ಹೊಂದಿರುವ ಗರ್ವಿಷ್ಠನನ್ನೂ ಆತ್ಮಸ್ತುತಿಗೈಯುವವನನ್ನೂ ್ಲಾಹನು ಮೆಚ್ಚುವುದಿಲ್ಲ."** (ಪವಿತ್ರ ಕುರ್‌ಆನ್, 4:36)

ಮಾತಿನಲ್ಲಿಯೂ ಕೃತಿಯಲ್ಲಿಯೂ ಅಹಂಕಾರ ಮತ್ತು ಮೇಲರಿಮೆಯನ್ನು ರಿಸುವವರು ಅಲ್ಲಾಹನಿಗೆ ಅಪ್ರಿಯರೆಂಬುದು ಈ ವಚನದ ತಾತ್ಪರ್ಯವಾಗಿದೆ. ಅಹಂಕಾರ ್ತು ಮೇಲರಿಮೆಯು ಅಲ್ಲಾಹನ ಇಬಾದತ್ ಮತ್ತು ಸೃಷ್ಟಿಗಳ ಸೇವೆ ಮಾಡುವುದರಿಂದ ನವನನ್ನು ದೂರವಿರಿಸುತ್ತದೆ. ವಾಸ್ತವದಲ್ಲಿ ಈ ಎರಡು ಗುಣಗಳೇ ಮಾನವನನ್ನು ನವನನ್ನಾಗಿ ಮಾಡುತ್ತವೆ. ಅದಿಲ್ಲದಿದ್ದರೆ, ಅವರು ಪ್ರಾಣಿಗಿಂತ ನೀಚರಾಗುತ್ತಾರೆ.

## ೂನಿನ ರಕ್ಷಣೆ

ಈ ಸಂದರ್ಭದಲ್ಲಿ ಒಂದು ವಿಷಯವು ವಿಶೇಷ ಗಮನಾರ್ಹವಾಗಿದೆ. ಇಲ್ಲಿ ತಂದೆ ಬಂದಿರು, ಸಂಬಂಧಿಕರು, ಬಡವರು, ಅಪೇಕ್ಷಿತರು ಇತ್ಯಾದಿ ಸಮಾಜದ ಇತರೆಲ್ಲ ್ಗಲ ವಿಭಾಗಗಳೊಡನೆ ಅತ್ಯುತ್ತಮ ರೀತಿಯಲ್ಲಿ ವರ್ತಿಸಬೇಕೆಂಬ ಶಿಕ್ಷಣವು ಮಕ್ಕಾ

ದಿಂದ ಮದೀನಾದ ವರೆಗಿನ ಕುರ್‌ಆನ್ ಅವತೀರ್ಣದ ಎಲ್ಲಾ ಹಂತಗಳಲ್ಲಿಯೂ ನಿರ
ನೀಡಲ್ಪಟ್ಟಿತು. ಹೀಗೆ ಪರಸ್ಪರ ಹಿತಚಿಂತನೆ, ಪ್ರೀತಿ ಮತ್ತು ಸಹಾನುಭೂತಿಯ ಭಾ
ಹುಟ್ಟಿಸಲಾಯಿತು. ದುರ್ಬಲರ, ವಂಚಿತರ ಮತ್ತು ಅರ್ಹರ ಹಕ್ಕುಗಳನ್ನು ಗುರು
ಅವರ ಜತೆ ಉತ್ತಮ ರೀತಿಯಲ್ಲಿ ವರ್ತಿಸಲು ನಿರಂತರ ಪ್ರೋತ್ಸಾಹಿಸಲಾಯಿತು. ಅನಂ
ಒಂದು ವಿಶೇಷ ಹಂತದಲ್ಲಿ ಯಾರೊಬ್ಬರ ಹಕ್ಕುಗಳೂ ನಿರಾಕರಿಸಲ್ಪಡದಿರಲಿಕ್
ಯಾರೊಂದಿಗೂ ಅನ್ಯಾಯವಾಗದಿರಲಿಕ್ಕಾಗಿ, ಅವರೆಲ್ಲರ ಹಕ್ಕುಗಳನ್ನು ನಿಖರ
ನಿರ್ಣಯಿಸಿ ಅದಕ್ಕೆ ಕಾನೂನಿನ ರಕ್ಷಣೆಯನ್ನು ಒದಗಿಸಲಾಯಿತು.

## ಜನಸೇವೆಯ ಹಲವಾರು ಮಾರ್ಗಗಳು

ಸಮಾಜದ ಬಡ-ದುರ್ಬಲ-ನಿರ್ಗತಿಕರ ಜನರೊಡನೆ ಮಾತಿನಲ್ಲಿ ಅನುಕಂಪ ಮ
ಸಹಾನುಭೂತಿ ತೋರದವರು ಈ ಜಗತ್ತಿನಲ್ಲಿ ತೀರಾ ವಿರಳ. ಆದರೆ ಅವರಿಗೆ ಕಾಯ
ನೆರವಾಗಲು ಸಿದ್ಧರಾಗುವವರು ದೊರೆಯುವುದು ಸ್ವಲ್ಪ ಕಷ್ಟ. ಆರ್ಥಿಕವಾಗಿ ಮ
ವೃತ್ತಿಪರವಾಗಿ ವಿವಶತೆ ಅನುಭವಿಸುವವರಿಗೆ ಮಾತಿನ ಸಹಾನುಭೂತಿಗಿಂತ ಹೆಚ
ಆರ್ಥಿಕ ನೆರವಿನ ಅಗತ್ಯವಿರುತ್ತದೆ. ಪ್ರೀತಿ ಮತ್ತು ಸಹಾನುಭೂತಿ ತುಂಬಿದ ಮಾತು
ಮತ್ತು ಮಧುರ ಭಾಷಣಗಳು ತಾತ್ಕಾಲಿಕವಾಗಿ ಅವರಿಗೆ ಸಾಂತ್ವನ ನೀಡಬಹುದು. ಆ
ಅದರಿಂದ ಅವರ ಸಮಸ್ಯೆ ಬಗೆಹರಿಯಲಾರದು.

## ಆರ್ಥಿಕ ಸೇವೆ

ಮಾನವರ ಸೇವೆ ಮತ್ತು ಅವರ ಶ್ರೇಯೋಭಿವೃದ್ಧಿಗಾಗಿ ತ್ಯಾಗ ಮನೋಭಾವದ
ಸಂಪತ್ತನ್ನು ವ್ಯಯಿಸಬೇಕು. ಅದನ್ನು ನಷ್ಟವೆಂದು ಪರಿಗಣಿಸಬಾರದೆಂದು ವಿಶ್ವಾಸಿ
ಪದೇಪದೇ ಆದೇಶಿಸಲಾಗಿದೆ. ಏಕೆಂದರೆ ಇತರರಿಗೆ ಉಪಯುಕ್ತವಾಗುವ ತನ್ನ ಹ
ಭವಿಷ್ಯಕ್ಕಾಗಿ ಆತನು ಕಾದಿರಿಸುವ ಅವನ ಬಹುದೊಡ್ಡ ಮೂಲ ಬಂಡವಾಳವಾಗಿದೆ
ಮೂಲಕ ಪರಲೋಕದಲ್ಲಿ ಅಲ್ಲಾಹನ ಮಹಾ ಅನುಗ್ರಹ ಮತ್ತು ಪ್ರತಿಫಲಕ್ಕೆ ಅ
ಅರ್ಹನಾಗುತ್ತಾನೆ. ಕುರ್‌ಆನ್ ಸಾಮಾನ್ಯವಾಗಿ ನಮಾಝ್‌ನ ಜತೆಯಲ್ಲಿ ಝ
ಮತ್ತು ದಾನಧರ್ಮವನ್ನು ಪ್ರಸ್ತಾಪಿಸಿದೆ. ಅದರ ಮಹತ್ವವು ಮಾನವ ಮನದಲ್ಲಿ ಬೇ
ಅಲ್ಲಾಹನನ್ನು ಸ್ಮರಿಸುವ ಯಾವೊಬ್ಬನೂ ಆ ಬಗ್ಗೆ ಅಸಡ್ಡೆ ತೋರಿಸದಿರಬೇಕೆಂಬ
ಅದರ ಉದ್ದೇಶ.

"ನಮಾಝನ್ನು ಸಂಸ್ಥಾಪಿಸಿರಿ, 'ಝಕಾತ್' ಕೊಡಿರಿ. ನೀವು ಭವಿಷ್ಯಕ್ಕಾಗಿ ಸಂಪ
ಕಳುಹಿಸುವ ಪುಣ್ಯಗಳೆಲ್ಲವನ್ನೂ ಅಲ್ಲಾಹನಲ್ಲಿ ಪಡೆಯುವಿರಿ. ನೀವು ಮಾಡುವುದೇ
ಅಲ್ಲಾಹನ ವೀಕ್ಷಣೆಯಲ್ಲಿದೆ." (ಪವಿತ್ರ ಕುರ್‌ಆನ್, 2:1

"ನಮಾಝ್ ಸಂಸ್ಥಾಪಿಸಿರಿ, ಝಕಾತ್ ಕೊಡಿರಿ ಮತ್ತು ಅಲ್ಲಾಹನಿಗೆ ಉ
ಸಾಲವನ್ನು ಕೊಡುತ್ತಲಿರಿ. ನೀವು ನಿಮಗಾಗಿ ಮುಂದೆ ಕಳುಹಿಸುವ ಪ್ರತಿಯೊ
ಸತ್ಕಾರ್ಯವನ್ನು ನೀವು ಅಲ್ಲಾಹನ ಬಳಿ ಕಾಣುವಿರಿ. ಅವನೇ ಅತ್ಯುತ್ತಮನು ಮತ್ತು

ಫಲವು ಬಹಳ ಹಿರಿದಾಗಿದೆ. ಅಲ್ಲಾಹನೊಡನೆ ಕ್ಷಮಾಯಾಚನೆ ಮಾಡುತ್ತಲಿರಿ. ಖಂಡಿತ
ಗಿಯೂ ಅಲ್ಲಾಹನು ಮಹಾಕ್ಷಮಾಶೀಲನೂ ಕರುಣಾನಿಧಿಯೂ ಆಗಿರುತ್ತಾನೆ."

(ಪವಿತ್ರ ಕುರ್‌ಆನ್, 73:20)

## ಶ್ವಾಸಿಗಳ ಸಂಪತ್ತಿನಲ್ಲಿ ವಂಚಿತರ ಹಕ್ಕು

ಕುರ್‌ಆನ್ ಸಮರ್ಪಿಸುವ ಮಾದರಿ ವಿಶ್ವಾಸಿಗಳ ಒಂದು ಮುಖ್ಯ ಗುಣವು ಅವರು
ಮ್ಮ ಹಣದಲ್ಲಿ ಸ್ವಂತದವರಿಗೆ ಮಾತ್ರವಲ್ಲ, ಸಮಾಜದ ದುರ್ಬಲ, ದರಿದ್ರ ಮತ್ತು
ರ್ಗತಿಕರಾದ ಜನರಿಗೂ ಹಕ್ಕುಗಳನ್ನು ನೀಡುತ್ತಾರೆ. ಕುರ್‌ಆನ್ ಹೇಳುತ್ತದೆ, "ಅವರ
ಪತ್ತಿನಲ್ಲಿ ಯಾಚಕರಿಗೂ ವಂಚಿತರಿಗೂ ಹಕ್ಕಿದೆ." (ಅದ್ದಾರಿಯಾತ್: 19)

ಇನ್ನೊಂದೆಡೆಯಲ್ಲಿ, "ಅವರ ಸಂಪತ್ತಿನಲ್ಲಿ ಯಾಚಕರಿಗೂ ನಿರ್ಗತಿಕರಿಗೂ ನಿರ್ದಿಷ್ಟ
ಕ್ಕಿದೆ." (ಅಲ್‌ಮಆರಿಜ್: 24-25) ಎನ್ನಲಾಗಿದೆ. ಮಾನವರ ಹಣದಲ್ಲಿ ಹತ್ತಿರದ
ತ್ತು ನೊಂದ ಜನರಲ್ಲಿ ಯಾರಿಗೆಲ್ಲಾ ಹಕ್ಕಿದೆ ಮತ್ತು ಯಾರಿಗಾಗಿ ಅದನ್ನು ವಿನಿಯೋಗಿಸ
ಕೆಂದು ಕುರ್‌ಆನ್ ವಿವರವಾಗಿ ತಿಳಿಸಿದೆ.

"ನಾವೇನನ್ನು ಖರ್ಚು ಮಾಡಬೇಕೆಂದು ಜನರು ಕೇಳುತ್ತಾರೆ. ನೀವು ಏನು ಖರ್ಚು
ಾಡುತ್ತೀರೋ ಅದನ್ನು ನಿಮ್ಮ ಮಾತಾಪಿತರ, ಸಂಬಂಧಿಕರ, ಅನಾಥರ, ಬಡವರ ಮತ್ತು
ಯಾಣಿಕರ ಮೇಲೆ ಖರ್ಚು ಮಾಡಿರೆಂದೂ, ನೀವು ಮಾಡುವ ಎಲ್ಲ ಒಳಿತುಗಳನ್ನು
ಲ್ಲಾಹ್ ಚೆನ್ನಾಗಿ ಅರಿಯುವವನಾಗಿರುತ್ತಾನೆಂದೂ ಉತ್ತರ ಹೇಳಿರಿ."

(ಅಲ್‌ಬಕರಃ: 215)

ಹೀಗೆ ಇಸ್ಲಾಮ್ ಹಕ್ಕುದಾರರು ಮತ್ತು ಅಪೇಕ್ಷಿತರಿಗಾಗಿ ಹಣ ವ್ಯಯಿಸಬೇಕೆಂದು
ತ್ತ ಹೇಳಿ ಅದರ ಪ್ರತಿಫಲ ಮತ್ತು ಪುಣ್ಯವನ್ನು ವ್ಯಕ್ತಗೊಳಿಸಿ ಅದಕ್ಕೆ ಹೆಚ್ಚಿನ ಪ್ರೋತ್ಸಾಹ
ಡಿದೆ.

## ಲ್ಲ ಸೇವೆಯೂ ದಾನ

ಪ್ರಸ್ತುತ ಹದೀಸ್ ಇನ್ನೊಂದು ಅಂಶದ ಮೇಲೆ ಬೆಳಕು ಚೆಲ್ಲುತ್ತದೆ. ಸೇವೆಯೆಂದು
ದಾಗ ಸಾಮಾನ್ಯವಾಗಿ ದೊಡ್ಡದೊಡ್ಡ ಸೇವಾ ಕಲ್ಪನೆಗಳು ಮನದಲ್ಲಿ ಮೂಡುತ್ತವೆ.
ಗಳನ್ನು ನಿರ್ವಹಿಸುವ ಸಾಮರ್ಥ್ಯ ಎಲ್ಲರಿಗೂ ಇರಲಾರದು. ಅದೇ ವೇಳೆ ಬಹಳ
ಭವಾದ ಸೇವೆಯನ್ನು ಹೆಚ್ಚಿನವರು ನಿರ್ಲಕ್ಷಿಸಿ ಬಿಡುತ್ತಾರೆ. ಈ ಕಲ್ಪನೆಯಿಂದಾಗಿ ಸಣ್ಣ
ತ್ತು ದೊಡ್ಡ ಸೇವೆಗಳ ನಿರ್ವಹಿಸದೆ ಉಳಿದು ಬಿಡುತ್ತದೆ. ಈ ಭಾವನೆಯನ್ನು ತಿದ್ದಿ
ಾ ಸಣ್ಣ ಸೇವೆಗಳ ಕಡೆಗೂ ಈ ಹದೀಸ್‌ನಲ್ಲಿ ಜನರ ಗಮನ ಸೆಳೆಯಲಾಗಿದೆ. ಸಣ್ಣ
ತ್ತು ದೊಡ್ಡ ಎಲ್ಲ ರೀತಿಯ ಸೇವೆಗಳೂ ಮಾನವರಿಗೆ ಸಲ್ಲಬೇಕೆಂದು ಪ್ರವಾದಿಯವರು
ವು ಕಡೆಗಳಲ್ಲಿ ಸ್ಪಷ್ಟಪಡಿಸಿದ್ದಾರೆ. ಎಲ್ಲ ಸೇವೆಗಳನ್ನೂ ಇಸ್ಲಾಮ್ ದಾನ ಮತ್ತು
ಣ್ಯವೆಂದು ಪರಿಗಣಿಸುತ್ತದೆ. ಆ ಬಗ್ಗೆ ಕೆಲವು ಪ್ರವಾದಿ ವಚನಗಳು ಹೀಗಿವೆ:

ಅಬೂಹುರೈರಾ ವರದಿ ಮಾಡಿದ್ದಾರೆ. ಪ್ರವಾದಿಯವರು(ಸ) ಅದನ್ನು ಹೀಗೆ ವಿ
ಸಿದ್ದಾರೆ. "ಇಬ್ಬರ ಮಧ್ಯೆ ನ್ಯಾಯ ಪಾಲಿಸುವುದು ದಾನವಾಗಿದೆ. ಓರ್ವರಿಗೆ ವಾಹನದ
ಪ್ರಯಾಣಿಸಲು ನೆರವಾಗುವುದು ದಾನವಾಗಿದೆ. ವಾಹನದಲ್ಲಿ ಇತರರ ವಸ್ತುಗಳನ್ನು ಹ
ಸಹಾಯ ಮಾಡುವುದು ದಾನವಾಗಿದೆ. ಸದ್ವರ್ತನೆಗಳು ದಾನವಾಗಿದೆ. ಹಾಗೆಯೇ ನಮಾ
ಗಾಗಿರುವ ಪ್ರತಿಯೊಂದು ಹೆಜ್ಜೆಯೂ ದಾನವಾಗಿದೆ. ದಾರಿಯಿಂದ ತೊಂದರೆಗಳ
ನಿವಾರಿಸುವುದು ದಾನವಾಗಿದೆ." (ಬುಖಾರಿ, ಮುಸ್ಲಿಮ

ಅಬೂಹುರೈರಾರ ಇನ್ನೊಂದು ವರದಿಯಲ್ಲಿ ಹೀಗಿದೆ: ಪ್ರವಾದಿ(ಸ) ಹೇಳಿದ
"ನೀವು ನಿಮ್ಮ ಸಹೋದರರನ್ನು ನೋಡಿ ಮುಗುಳ್ನಗುವುದು ದಾನವಾಗಿದೆ. ಒಳ
ಉಪದೇಶಿಸುವುದು ಕೆಡುಕನ್ನು ವಿರೋಧಿಸುವುದು ದಾನವಾಗಿದೆ. ಕಾಡು ಅಥವಾ ನಿಜ
ಸ್ಥಳದಲ್ಲಿ ದಿಕ್ಕುಗಾಣದೆ ಕಷ್ಟಪಡುತ್ತಿರುವವರಿಗೆ ದಾರಿ ತೋರಿಸುವುದು ದಾನವಾಗಿ
ದಾರಿಯಿಂದ ಮಾಲಿನ್ಯಗಳನ್ನು, ಮುಳ್ಳು, ಮೂಳೆ ಇತ್ಯಾದಿಗಳನ್ನು ಹೆಕ್ಕಿ ತೆಗೆಯುವು
ದಾನವಾಗಿದೆ. ನೀರು ಸೇದುವ ನಿನ್ನ ತೊಟ್ಟಿಯಿಂದ ನೀರು ಸುರಿದು ಕೊಡುವು
ದಾನವಾಗಿದೆ." (ತಿರ್ಮಿ

ತಾತ್ಪರ್ಯವೆಂದರೆ ಈ ಎಲ್ಲ ಕಾರ್ಯಗಳೂ ದಾನವಾಗಿದ್ದು ಪ್ರತಿಯೊಂದಕ್ಕೂ ಪು
ಲಭಿಸುವುದು. ಈ ವಚನಗಳಲ್ಲಿ ಮಾನವ ಸೇವೆ ಮತ್ತು ಒಳಿತಿನ ಅನೇಕ ರೂಪಗಳ
ವಿವರಿಸಲಾಗಿದೆ. ಸೇವಾ ಮನೋಭಾವ ಜಾಗೃತವಾಗಿದ್ದರೆ, ಆ ಪೈಕಿ ಹಲವು ಸೇವೆಗಳ
ಬಹಳ ಸುಲಭದಲ್ಲಿ ನಿರ್ವಹಿಸಬಹುದಾಗಿದೆ. "ಈ ಎಲ್ಲ ಸದ್ವರ್ತನೆಗಳೂ ದಾನವಾಗಿ
ಯೆಂದು ಬೇರೊಂದು ಪ್ರವಾದಿ ವಚನದಲ್ಲಿ ಹೇಳಲಾಗಿದೆ. ಸೇವೆಯ ಎಲ್ಲ ರೂಪಗ
ಸಮಗ್ರವಾಗಿ ಪ್ರಸ್ತುತ ಹದೀಸ್‌ನಲ್ಲಿ ಒಳಗೊಂಡಿದೆ. (ಬುಖಾರಿ, ಮುಸ್ಲಿಮ

ದಾನ ಧರ್ಮಗಳು ಪುಣ್ಯ ಕರ್ಮವೆಂಬ ಬಗ್ಗೆ ಎಲ್ಲರಿಗೂ ತಿಳಿದಿದೆ. ಅ
ಮಹತ್ವ ಮತ್ತು ಪ್ರಯೋಜನವನ್ನು ಯಾರಿಂದಲೂ ನಿರಾಕರಿಸಲು ಸಾಧ್ಯವಿಲ್ಲ. ಮಾನ
ಸೇವೆ ಮತ್ತು ಅದರ ಹಿತವನ್ನು ಗುರಿಯಾಗಿರಿಸಿರುವ ಚಟುವಟಿಕೆಗಳನ್ನೂ ದಾನವೆ
ಘೋಷಿಸಿ ಅದರ ಮಹತ್ವವನ್ನು ಮಾನವ ಮನಸ್ಸುಗಳಲ್ಲಿ ಇಸ್ಲಾಮ್ ಇಲ್ಲಿ ದ
ಗೊಳಿಸಿದೆ. ಜೊತೆಗೆ ಅತಿ ಸಣ್ಣ ಸತ್ಕರ್ಮವನ್ನೂ ಕ್ಷುಲ್ಲಕವೆಂದು ಪರಿಗಣಿಸಬಾರದೆ
ಬೋಧಿಸಿದೆ. ಏಕೆಂದರೆ, ದೇವನ ಸೃಷ್ಟಿಗಳಿಗೆ ಏನಾದರೂ ಪ್ರಯೋಜನ ದೊರೆಯ
ಸಾಧ್ಯತೆಯಿರುವ ಕಾರ್ಯದಿಂದ ಮುಖ ತಿರುಗಿಸುವುದು ಸರಿಯಲ್ಲ. ಹ. ಅಬೂದ
ವರದಿ ಮಾಡಿರುವ ಪ್ರವಾದಿ ವಚನದಲ್ಲಿ ಹೀಗಿದೆ: "ಒಳಿತಿನ ಬುನಾದಿಯಲ್ಲಿ
ಯಾವ ಚಟುವಟಿಕೆಯನ್ನೂ ಕ್ಷುಲ್ಲಕವೆಂದು ಪರಿಗಣಿಸಬಾರದು. ನಿನ್ನ ಸಹೋದರನ
ಮುಗುಳ್ನಗೆಯಿಂದ ಭೇಟಿಯಾಗುವುದೂ ಸರಿ." (ಮುಸ್ಲಿಮ

ಜನಸೇವೆಯು ಎಷ್ಟೇ ಚಿಕ್ಕದಾಗಿದ್ದರೂ ನಿರ್ವಹಿಸಲ್ಪಡಬೇಕು. ಅದು ನ
ಶಿಕ್ಷೆಯಿಂದ ಪಾರುಗೊಳಿಸುವ ಹೆದ್ದಾರಿಯಾಗಿದೆ. ನರಕದ ಭಯಾನಕತೆಗಳನ್ನು ವರ
ಅದರಿಂದ ಅಭಯ ಯಾಚಿಸಿದ ಬಳಿಕ ಪ್ರವಾದಿಯವರು ಹೇಳಿದರು.

"ಖರ್ಜೂರದ ಒಂದು ತುಂಡು ದಾನ ಮಾಡಿಯಾದರೂ ನರಕದಿಂದ ಪಾರಾಗ
ಕು. ಅದು ಸಾಧ್ಯವಿಲ್ಲದಿದ್ದರೆ ಒಂದು ಉತ್ತಮ ಮಾತಿನಿಂದಾದರೂ ಸರಿ."

(ಬುಖಾರಿ, ಮುಸ್ಲಿಮ್)

ಸಹಾಯವು ಜನರಿಗೆ ಸಂತೋಷ ಮತ್ತು ನೆಮ್ಮದಿದಾಯಕವಾಗಿರುವಂತೆಯೇ
ಮಾತೂ ಸಾಂತ್ವನ ಮತ್ತು ಸಹಾನುಭೂತಿಯನ್ನು ಒದಗಿಸುತ್ತದೆ. ಆದ್ದರಿಂದ,
ರಡೂ ದಾನವಾಗಿದೆ.

ಮಾನವರ ಸೇವೆ ಮತ್ತು ಹಿತಾಕಾಂಕ್ಷೆಯ ರಂಗವು ಸಮಾಜದ ಪ್ರತಿಯೋರ್ವ
ಕ್ತಿಗೂ ತನ್ನ ಸ್ಥಾನಮಾನಕ್ಕೆ ತಕ್ಕಂತೆ ನಿರ್ವಹಿಸಬಹುದಾದ ರೀತಿಯಲ್ಲಿ ಬಹಳಷ್ಟು
ಾಲವಾಗಿದೆ. ಅದಕ್ಕಾಗಿ ಶ್ರೀಮಂತನಾಗಬೇಕೆಂದಿಲ್ಲ. ರಾಷ್ಟ್ರ ಅಥವಾ ಸರಕಾರದ
ವಿನ ಅಗತ್ಯವೂ ಇಲ್ಲ. ಸಂಪತ್ತಿನಿಂದ ಮತ್ತು ಸರಕಾರದ ಸಹಕಾರದಿಂದ ನಿರ್ವಹಿಸ
ಹುದಾದ ಕೆಲವು ಸೇವಾ ರಂಗಗಳಿವೆ ನಿಜ. ಆದರೆ ಉನ್ನತ ನೀತಿ ಚಾರಿತ್ರ್ಯವಿರುವ
ಕ್ತಿಗಳು ಮಾತ್ರ ನಿರ್ವಹಿಸಬಹುದಾದ ಸೇವೆಯ ಅನೇಕ ರಂಗಗಳೂ ಇವೆ.

ದುರ್ಬಲರಿಗೆ ಮಾಸಾಶನ, ನಿರುದ್ಯೋಗಿಗಳಿಗೆ ಉದ್ಯೋಗ, ಮನೆ ರಹಿತರಿಗೆ ಮನೆ
ತ್ತು ರೋಗಿಗಳಿಗೆ ವೈದ್ಯಕೀಯ ಸಹಾಯ ನೀಡುವುದು ಸರಕಾರಕ್ಕೆ ಸುಲಭ. ಆದರೆ ಎಲ್ಲ
ಪನ್ಮೂಲಗಳ ಹೊರತಾಗಿಯೂ ಸರಕಾರಕ್ಕೆ ತಂದೆ, ತಾಯಿ, ಪತ್ನಿ, ಮಕ್ಕಳು,
ಹೋದರರು, ಮಿತ್ರರು ಮತ್ತು ನೆರೆಕರೆಯವರು ಅಥವಾ ಸಭ್ಯ ಪೌರರಿಗೆ ಪರ್ಯಾಯ
ಗಲು ಸಾಧ್ಯವಿಲ್ಲ. ಮಾನವರಿಗೆ ಭಾವನಾತ್ಮಕ ಶಾಂತಿ ಮತ್ತು ಗೌರವಾರ್ಹ ವರ್ತನೆಯು
ಕಾರದ ಯಾವುದೇ ಸಣ್ಣ ಸಂಸ್ಥೆಯಿಂದಲೂ ನೀಡಲು ಸಾಧ್ಯವಿಲ್ಲ.

## ರ್ತುಸೇವೆಯ ಪ್ರಾಮುಖ್ಯತೆ

ಮಾನವರ ತಾತ್ಕಾಲಿಕ ಮತ್ತು ತುರ್ತು ಬೇಡಿಕೆಗಳ ಈಡೇರಿಕೆಯು ಜನಸೇವೆಯ
ಬ್ಬೊಂದು ಪ್ರಧಾನ ರೂಪವಾಗಿದೆ. ತಾತ್ಕಾಲಿಕ ಮತ್ತು ಸಹಾಯದ ಅಗತ್ಯವಿರುವ ಕೆಲವು
ದರ್ಭಗಳು ಮಾನವ ಜೀವನದಲ್ಲಿ ಸಹಜವಾಗಿವೆ. ಅಂಥ ಸಂದರ್ಭಗಳಲ್ಲಿ ಒಂದು
ಣ್ಣ ಅಸಡ್ಡೆಯೂ ಪರಿಹರಿಸಲಾಗದ ನಷ್ಟವುಂಟು ಮಾಡಬಲ್ಲುದು. ಕೆಲವೊಮ್ಮೆ
ಾಯ ಮಾಡುವವನಿಗೆ ತಾತ್ಕಾಲಿಕವಾಗಿ ಮಾತ್ರ ಸಾಧ್ಯವಿರುತ್ತದೆ. ಅದಕ್ಕಿಂತ ಹೆಚ್ಚು
ಡಲು ಅವನಲ್ಲಿ ಶಕ್ತಿಯಿರುವುದಿಲ್ಲ. ಆದ್ದರಿಂದಲೇ ಇಂಥ ಸಂದರ್ಭಗಳ ಸೇವೆ ಮತ್ತು
ಾಯಕ್ಕೆ ಇಸ್ಲಾಮ್ ಭಾರೀ ಪ್ರೋತ್ಸಾಹ ನೀಡಿದೆ. ಜೊತೆಗೆ, ಅಪೇಕ್ಷಿತನಿಗೆ ತಾತ್ಕಾಲಿಕವಾಗಿ
ಾಯ ಮಾಡಬೇಕಿದ್ದರೆ ಮನುಷ್ಯ ಹಿಂಜರಿಯಬಾರದೆಂದು ತಾಕೀತು ಮಾಡಿದೆ. ತುರ್ತು
ಾಯದ ಅಗತ್ಯವಿರುವ ಕೆಲವು ಸಂದರ್ಭಗಳನ್ನು ಇಲ್ಲಿ ಕೊಡಲಾಗಿದೆ.

## ಣಬಡಿಸುವುದು

ಹಸಿವು, ಬಾಯಾರಿಕೆ ತುರ್ತು ಸೇವೆಯ ಅಗತ್ಯವಿರುವ ಪ್ರಮುಖ ಸಂದರ್ಭವಾಗಿದೆ.
ವೆಯಿಂದ ಬಳಲುವಾತನ ಹಸಿವೆಯನ್ನು ಕೂಡಲೇ ನಿವಾರಿಸಬೇಕಾದುದು ಆತನ

ಹಕ್ಕಾಗಿದೆ. ಸ್ವರ್ಗದ ಶಾಶ್ವತ ಸುಖಗಳಿಗೆ ಹಕ್ಕುದಾರರಾಗುವ ಅಲ್ಲಾಹನ ಸಜ್ಜ
ದಾಸರನ್ನು ಅಭಿನಂದಿಸಿ ಕುರ್‌ಆನ್ ಒಂದೆಡೆ ಹೀಗೆ ಹೇಳಿದೆ, "ಅಲ್ಲಾಹನ ಮೇ
**ಪ್ರೇಮದಿಂದ ದರಿದ್ರರಿಗೂ ಅನಾಥರಿಗೂ ಸೆರೆಯಾಳುಗಳಿಗೂ ಊಟ ಕೊಡುತ್ತಾರೆ ಮ**
**ಅವರೊಡನೆ ಹೇಳುತ್ತಾರೆ: "ನಾವು ನಿಮಗೆ ಕೇವಲ ಅಲ್ಲಾಹನಿಗಾಗಿ ಉಣಿಸುತ್ತಿದ್ದೇ**
**ನಾವು ನಿಮ್ಮಿಂದ ಯಾವುದೇ ಪ್ರತಿಫಲವನ್ನಾಗಲಿ, ಕೃತಜ್ಞತೆಯನ್ನಾಗಲಿ ಬಯ**
**ವುದಿಲ್ಲ. ನಮಗಂತು, ನಮ್ಮ ಪ್ರಭುವಿನಿಂದ ಆ ತೀವ್ರ ಕಾಠಿಣ್ಯದ ಅತ್ಯಂತ ಸುದೀರ್ಘ**
**ದಿನದ ಭಯವಿದೆ."** **(ಪವಿತ್ರ ಕುರ್‌ಆನ್, 76:9-1**

ಹಸಿದಾತನಿಗೆ ಉಣಬಡಿಸುವ ಶ್ರೇಷ್ಠತೆಯನ್ನು ಹಲವು ಹದೀಸ್‌ಗಳಲ್ಲಿ ವಿವ
ಲಾಗಿದೆ: ಅಬ್ದುಲ್ಲಾ ಬಿನ್ ಅಮ್ರ್ ಬಿನ್ ಆಸ್(ರ) ವರದಿ ಮಾಡಿದ್ದಾರೆ: ಇಸ್ಲಾಮಿನ
ಅತ್ಯಂತ ಶ್ರೇಷ್ಠ ಕರ್ಮ ಯಾವುದೆಂಬ ಒಬ್ಬನ ಪ್ರಶ್ನೆಗೆ ಪ್ರವಾದಿಯವರು(ಸ) ಹಿ
ಉತ್ತರಿಸಿದರು, "ನೀನು ಊಟ ನೀಡು, ಪರಿಚಿತನಿಗೂ ಅಪರಿಚಿತನಿಗೂ ಸಲಾಮ್ ಹೇಳ
(ಬುಖಾರಿ, ಮುಸ್ಲಿಮ

ಹ. ಅಬ್ದುಲ್ಲಾ ಬಿನ್ ಸಲಾಮ್(ರ) ಹೇಳುತ್ತಾರೆ: ಪ್ರವಾದಿಯವರು(ಸ) ಮದೀನ
ಆಗಮಿಸಿದಾಗ ನಾನು ಅಲ್ಲಿದ್ದೆ. ಅವರ ಮುಖಾರವಿಂದವನ್ನು ನೋಡಿದೊಡನೆ
ಅವರೋರ್ವ ಸಾಮಾನ್ಯ ಮಾನವನಲ್ಲವೆಂಬುದು ನನಗೆ ಮನವರಿಕೆಯಾಯಿತು.
ಸಂದರ್ಭದಲ್ಲಿ ಅವರು ಮೊದಲು ಹೇಳಿದ ಮಾತು ಹೀಗಿದೆ, "ಜನರೇ ಸಲಾಮ್ ಹೇಳ
ರೂಢಿಯನ್ನು ಪ್ರಚಾರ ಮಾಡಿರಿ. ಹಸಿದವನಿಗೆ ಊಟ ನೀಡಿರಿ ಮತ್ತು ಕುಟು
ಸಂಬಂಧವನ್ನು ಬೆಳೆಸಿರಿ. ರಾತ್ರಿಯಲ್ಲಿ ಜನರು ನಿದ್ರಿಸಿರುವಾಗ ಎಚ್ಚೆತ್ತು ನಮಾಝ
ಮಾಡಿರಿ. ಹಾಗಾದರೆ ನಿಮಗೆ ಶಾಂತಿ ಸಮಾಧಾನದಿಂದ ಸ್ವರ್ಗ ಪ್ರವೇಶಿಸಬಹುದು
(ಮಿಷ್ಕಾತ್:- ತಿರ್ಮಿದಿ, ಇಬ್ನುಮಾಜಃ, ದಾರಿ

ಹಸಿದಾತನಿಗೆ ಒಂದು ಹೊತ್ತಿನ ಆಹಾರ ನೀಡುವುದು, ಬಾಹ್ಯ ನೋಟಕ್ಕೆ ಒ
ಸಣ್ಣ ಸೇವೆಯಾಗಿದೆ. ಆದರೆ ಒಂದು ಸಮೂಹಕ್ಕೆ ಅದರ ಮಹತ್ವದ ಅರಿವಾದರೆ
ಸಮಾಜದಲ್ಲಿ ಯಾವೊಬ್ಬನೂ ಹಸಿವೆಗೀಡಾಗುವ ಸ್ಥಿತಿಯಿರಲಾರದು. ಮಾತ್ರವಲ್ಲ,
ಹಸಿವು ಮತ್ತು ಬಡತನವು ಒಂದು ಸಮಸ್ಯೆಯೇ ಆಗಲಾರದೆಂಬುದು ವಾಸ್ತವಿಕವಾ
ಇಸ್ಲಾಮಿ ರಾಷ್ಟ್ರದ ಆರ್ಥಿಕ ಸ್ಥಿತಿ ಅಷ್ಟೊಂದು ಸುಭದ್ರವಾಗಿಲ್ಲದ ಮದೀನಾದ ಪ್ರಾಥ
ಹಂತದಲ್ಲಿ ಹಸಿವು ಮತ್ತು ಬಡತನದ ಪರಿಹಾರಕ್ಕಾಗಿ ಸ್ವೀಕರಿಸಿದ ಉಪಯುಕ್ತ ಮಾರ್ಗ
ಪೈಕಿ ಒಂದು, ಹಸಿದವನಿಗೆ ಆಹಾರ ನೀಡುವಂತೆ ಜನರನ್ನು ಪ್ರೋತ್ಸಾಹಿಸುವುದಾಗಿ

ಹ. ಅಬೂಹುರ್ರೈರಾ(ರ) ವರದಿ ಮಾಡಿದ ಇನ್ನೊಂದು ಹದೀಸ್‌ನಲ್ಲಿ ಹೀಗಿ

"ಇಬ್ಬರ ಆಹಾರವು ಮೂರು ಮಂದಿಗೆ ಸಾಕಾಗುತ್ತದೆ. ಹಾಗೆಯೇ ಮ
ಮಂದಿಯ ಆಹಾರ ನಾಲ್ಕು ಮಂದಿಗೆ ಸಾಕಾಗುತ್ತದೆ." (ಬುಖಾರಿ, ಮುಸ್ಲಿ

"ಇನ್ನೊಂದು ವರದಿ ಹೀಗಿದೆ: ಒಬ್ಬನ ಆಹಾರವು ಇಬ್ಬರಿಗೆ, ಇಬ್ಬರ ಆ
ನಾಲ್ವರಿಗೆ ಹಾಗೂ ನಾಲ್ವರ ಆಹಾರ ಎಂಟು ಮಂದಿಗೆ ಸಾಕಾಗುತ್ತದೆ." (ಮುಸ್ಲಿ

ಇದೇ ತಾತ್ಪರ್ಯವನ್ನು ಹೊಂದಿರುವ ಇನ್ನೊಂದು ಪ್ರವಾದಿ ವಚನವನ್ನು ಉಮರ್(ರ) ರಿಸಿದ್ದಾರೆ. "ಒಬ್ಬರ ಆಹಾರ ಇಬ್ಬರಿಗೆ, ಇಬ್ಬರ ಆಹಾರ ಮೂವರಿಗೆ ಅಥವಾ ನಾಲ್ಕು ನಿಗೆ ಮತ್ತು ನಾಲ್ಕು ಮಂದಿಯ ಆಹಾರವು ಐದಾರು ಮಂದಿಗೂ ಸಾಕಾಗುವುದು. (ಇಬ್ನುಮಾಜಃ)

ಈ ಎಲ್ಲ ವರದಿಗಳಲ್ಲಿ 2 ವಿಭಿನ್ನ ವಿಷಯಗಳನ್ನು ಹೇಳಲಾಗಿದ್ದರೂ ಅವುಗಳ ಕೆಯೂ ಮೂಲಭೂತವಾಗಿ ಒಂದೇ ಆಗಿದೆ. ಅರ್ಥಾತ್, ಇಬ್ಬರಿಗೆ ಹೊಟ್ಟೆ ತುಂಬಾ ಬಹುದಾದ ಆಹಾರದಿಂದ ಮೂವರ ಅವಶ್ಯಕತೆಯನ್ನು ಸುಲಭದಲ್ಲಿ ಪೂರೈಸ ವೆಂದು ಮೊದಲ ಹದೀಸ್‌ನಲ್ಲಿ ಹೇಳಿದೆ. ಅನಂತರದ 2 ಹದೀಸ್‌ಗಳಲ್ಲಿ, ಒಬ್ಬರ ರದಿಂದ ಇಬ್ಬರ ಅಗತ್ಯವನ್ನು ಪೂರೈಸಬಹುದೆಂದು ಹೇಳಲಾಗಿದೆ. ಹಸಿವು ತಣಿಯುವುದು ಾ ತಣಿಯದಿರುವುದು ವ್ಯಕ್ತಿಗಳ ನಿಸರ್ಗಾನುಸಾರವಾಗಿದೆ. ಪ್ರಾಣವನ್ನು ಉಳಿಸುವುದೇ ಉದ್ದೇಶವಾಗಿದೆ. ಈ ಹದೀಸ್‌ಗಳಲ್ಲಿ ಒಬ್ಬನು ತನ್ನ ಊಟದಲ್ಲಿ ಹಸಿದವರನ್ನೂ ಕೊಳ್ಳಬೇಕು ಮತ್ತು ಇರುವ ಊಟವು ಸಮೃದ್ಧಿದಾಯಕವಾಗುವುದೆಂದೂ ಅದರಿಂದ ಹಸಿವು ಇಂಗಬಹುದೆಂದೂ ಅಲ್ಲಾಹನಿಂದ ನಿರೀಕ್ಷಿಸಲು ಪ್ರೇರೇಪಿಸಲಾಗಿದೆ.

ಬಡವರಿಗೆ ನೆರವು ಮತ್ತು ಹಸಿದವನಿಗೆ ಆಹಾರ ನೀಡುವ ಭಾವನೆಯನ್ನು ದಿಯವರು(ಸ) ಸಮಾಜದಲ್ಲಿ ಹೀಗೆ ಸೃಷ್ಟಿಸಿದರೆಂದು ಆಯಿಶಾ(ರ) ವರದಿ ಮಾಡಿದ ಸ್‌ನಿಂದ ತಿಳಿಯಬಹುದು.

"ಒಬ್ಬರಿಗೆ ಒಂದು ಆಡನ್ನು ಕೊಯ್ದು ವಿತರಣೆ ಮಾಡಿದ ಬಳಿಕ ಪ್ರವಾದಿಯವರು(ಸ) ಡನೆ ವಿಚಾರಿಸಿದರು. ಎಷ್ಟು ಮಾಂಸ ಉಳಿದಿದೆ. ಆಡಿನ ತೋಳಿನ ಹೊರತು ಲ್ಲವನ್ನೂ ದಾನ ಮಾಡಿರುವುದಾಗಿ ನಾನು ತಿಳಿಸಿದೆ" ಆ ತೋಳಿನ ಹೊರತು ಬಾಕಿ ವೂ ಉಳಿಯುವುದೆಂದು ಪ್ರವಾದಿಯವರು(ಸ) ಉತ್ತರಿಸಿದರು" (ತಿರ್ಮಿದಿ, ಅಹ್ಮದ್) ರ ಪುಣ್ಯ ಮತ್ತು ಪ್ರತಿಫಲವು ಸುರಕ್ಷಿತವಾಗಿರುವುದರಿಂದ ಅವು ಮುಗಿದು ಯಿತೆಂದು ಭಾವಿಸಬೇಕಾಗಿಲ್ಲವೆಂಬುದೇ ಪ್ರವಾದಿಯವರ(ಸ) ಮಾತಿನ ಸಾರಾಂಶ.

ಪ್ರವಾದಿಯವರ ಕಾಲದಲ್ಲಿ ಬಲಿಮಾಂಸವನ್ನು ಒಣಗಿಸಿ ದಿನಗಟ್ಟಳೆ ದಾಸ್ತಾನಿಗಿರಿಸುವ ಯಿತ್ತು. ಬರಗಾಲದ ದಿನಗಳಲ್ಲಿ 3 ದಿನಗಳಿಗಿಂತ ಹೆಚ್ಚು ಕಾಲ ದಾಸ್ತಾನಿರಿಸ ದೆಂದು ಪ್ರವಾದಿಯವರು ಕಟುವಾಗಿ ಆದೇಶಿಸಿದ್ದರು. ಆ ಆದೇಶಕ್ಕೆ ಶ್ರೀಮಂತರು ಬಡವರಿಗೆ ಆಹಾರವಾಗಿ ನೀಡಬೇಕೆಂಬ ಕಳಕಳಿಯೇ ಪ್ರೇರಕವಾಗಿತ್ತೆಂದು ಶಾ(ರ) ಸ್ಪಷ್ಟಪಡಿಸಿದ್ದಾರೆ. (ಬುಖಾರಿ)

ದರಿದ್ರರಿಗೆ ಆಹಾರ ನೀಡುವುದು ಕೆಲವು ಸಹಾಬಿಗಳ ಮಟ್ಟಿಗೆ ಬಹಳ ಪ್ರಿಯ ಕರ್ಮ ತ್ತು. ಆ ಬಗ್ಗೆ ಅವರ ಕಾಳಜಿಯನ್ನು ಈ ಕೆಳಗಿನ ಘಟನೆಗಳಿಂದ ತಿಳಿಯಬಹುದು. ಖ್ಯಾತ ಸಹಾಬಿ ಅಬ್ದುಲ್ಲಾ ಬಿನ್ ಉಮರ್‌ರು(ರ) ಯಾವನಾದರೂ ಬಡವನ ಎಲ್ಲಿ ಹೊರತು ಊಟ ಮಾಡುತ್ತಿರಲಿಲ್ಲವೆಂದು ಹ. ನಾಫಿಅ್ ಹೇಳಿದ್ದಾರೆ. ರಿ) ಬಡವರಿಗೆ ಧಾರಾಳವಾಗಿ ಆಹಾರ ನೀಡುತ್ತಿದ್ದುದಕ್ಕಾಗಿ ತನ್ನನ್ನು ಟೀಕಿಸಿದ

ಉಮರ್‌ರಿಗೆ ಸುಹೈಬ್ ಹೀಗೆ ಉತ್ತರಿಸಿದರು, "ಬಡವರಿಗೆ ಆಹಾರ ನೀಡುವ ಮ
ಸಲಾಮ್ ಹೇಳಿದರೆ ಉತ್ತರಿಸುವವರೇ ನಿಮ್ಮ ಪೈಕಿ ಅತ್ಯುತ್ತಮರೆಂದು ಪ್ರವಾದಿಯ
ಈ ನಡವಳಿಕೆಗೆ ಪ್ರೇರೇಪಿಸಿದ್ದರು." (ಬುಖಾ

ಈ ಕುರಿತು ಪಾಠಬೋಧಕ ಘಟನೆಯೊಂದು ಹದೀಸ್ ಗ್ರಂಥಗಳಲ್ಲಿ
ಸಿಗುತ್ತದೆ.

ಅಬೂಹುರೈರಾ(ರ) ವರದಿ ಮಾಡಿದ್ದಾರೆ: ಒಬ್ಬರು ಪ್ರವಾದಿಯವರ ಸ
ಬಂದು ತನ್ನ ಕಡು ಬಡತನ ಮತ್ತು ದಾರಿದ್ರ್ಯದ ಬಗ್ಗೆ ತಿಳಿಸಿದಾಗ ತಮ್ಮ ಪತ್ನಿಯ
ಓರ್ವರ ಮನೆಯಿಂದ ಆತನಿಗಾಗಿ ಏನಾದರೂ ತರಲು ಪ್ರವಾದಿ ವಿನಂತಿಸಿದರು. ನ
ಹೊರತು ಅಲ್ಲಿ ಬೇರೇನೂ ಇಲ್ಲವೆಂದು ಉತ್ತರ ದೊರೆಯಿತು. ಅವರ ಇತರ ಪತ್ನಿ
ಮನೆಗಳಿಂದಲೂ ಅದೇ ಉತ್ತರ ದೊರೆಯಿತು. ಆಗ ಪ್ರವಾದಿಯವರು(ಸ) ಅನುಯ
ಗಳೊಡನೆ, "ಈತನಿಗೆ ಆಹಾರ ನೀಡಲು ಯಾರು ತಯಾರಿದ್ದೀರಿ?" ಎಂದು ವಿಚಾರಿಸಿ
ಆ ಕೂಡಲೇ ಓರ್ವ ಅನ್ಸಾರಿಯು (ಕೆಲವು ವರದಿಗಳಲ್ಲಿ ಅವರು ಅಬೂತಲ್ಹಾ ಎ
ಹೇಳಲಾಗಿದೆ) ತಾನು ಸಿದ್ಧನೆಂದು ತಿಳಿಸಿ ಅವರನ್ನು ತಮ್ಮ ಮನೆಗೆ ಕರೆದೊಯ
ಆದರೆ, ಅಲ್ಲಿ ಮಕ್ಕಳಿಗೆ ಬೇಕಾಗುವಷ್ಟು ಆಹಾರ ಮಾತ್ರ ಇತ್ತು. ಆದ್ದರಿಂದ ಮೊ
ಮಕ್ಕಳನ್ನು ಮಲಗಿಸಿ ಅನಂತರ ಅತಿಥಿಗಾಗಿ ತಟ್ಟೆಯಲ್ಲಿ ಆಹಾರ ಬಡಿಸಿದ
ದೀಪವನ್ನು ನಂದಿಸುವಂತೆ ಅವರು ಪತ್ನಿಗೆ ಆಜ್ಞಾಪಿಸಿದರು. ತರುವಾಯ ಈವ
ಕತ್ತಲೆಯಲ್ಲಿ ಅತಿಥಿಯ ಜತೆಯಲ್ಲಿ ಆಹಾರ ಸೇವಿಸುತ್ತಿರುವಂತೆ ನಟಿಸಿದರು. ವಾಸ್ತ
ಅತಿಥಿ ಹೊಟ್ಟೆ ತುಂಬಾ ಆಹಾರ ಸೇವಿಸಿದರೂ ಆ ದಂಪತಿಗಳು ರಾತ್ರಿಯಿಡೀ
ಯಿಂದಲೇ ಕಳೆದಿದ್ದರು. ಬೆಳಗಾತ ಪ್ರವಾದಿಯವರ(ಸ) ಬಳಿಗೆ ಬಂದಾಗ ಅಲ್ಲಾ
ಅವರ ಕೃತ್ಯದಿಂದ ಸಂಪ್ರೀತನಾಗಿರುವುದಾಗಿ ಪ್ರವಾದಿಯವರು(ಸ) ಅವರಿಗೆ ತಿಳಿಸಿ
ಈ ಹಿನ್ನೆಲೆಯಲ್ಲಿ ಕೆಳಗಿನ ಕುರ್‌ಆನ್ ವಚನ ಅವತೀರ್ಣವಾಯಿತು.

"ಸ್ವತಃ ತಮಗೆ ಅಗತ್ಯವಿದ್ದರೂ ಇತರರಿಗೆ ತಮ್ಮ ಮೇಲೆ ಪ್ರಾಶಸ್ತ್ಯ ನೀಡು
ವಾಸ್ತವದಲ್ಲಿ ಯಾರು ತಮ್ಮ ಮನಸ್ಸಿನ ಸಂಕುಚಿತತೆಯಿಂದ ರಕ್ಷಿಸಲ್ಪಟ್ಟರೋ ಅ
ವಿಜಯಿಗಳು." (ಪವಿತ್ರ ಕುರ್‌ಆನ್, 

## ಊಟ ಮಾಡಿಸಲು ಸಹಕಾರ

ಬಡದರಿದ್ರರಿಗೆ ಆಹಾರ ನೀಡುವ ಕಾರ್ಯದಲ್ಲಿ ಯಾವುದಾದರೂ ರೀತಿ
ನೆರವಾಗುವ ಪತ್ನಿಯರಿಗೂ ಸೇವಕರಿಗೂ ಅದರ ಪುಣ್ಯ ದೊರೆಯುವುದೆಂಬುದು ಇಸ
ನಂಬಿಕೆಯಾಗಿದೆ. 'ಪತ್ನಿಯು ತನ್ನ ಪತಿಗೆ ನಷ್ಟವಾಗದ ರೀತಿಯಲ್ಲಿ ಆತನ ಮನೆ
ಯಾರಿಗಾದರೂ ಆಹಾರ ನೀಡಿದರೆ ಅವಳಿಗೂ ಪತಿಗೆ ಸಮಾನವಾದ ಪುಣ್ಯ ದೊರೆ
ದೆಂದು ಪ್ರವಾದಿಯವರು ಹೇಳಿದ್ದಾರೆ. (ಬುಖಾರಿ, ಮುಸ್ಲಿಮ್: ವರದಿ: ಆ
ಇನ್ನೊಂದು ಹದೀಸ್‌ನಲ್ಲಿ ಹೀಗಿದೆ:

"ಒಡೆಯನು ಆಜ್ಞಾಪಿಸಿದ ಕೆಲಸಗಳನ್ನು ಸೇವಕನು ನೆರವೇರಿಸುತ್ತಾನೆ. ಕೆಲವೊಮ್ಮೆ
) ತನ್ನೊಡನೆ ಯಾರಿಗಾದರೂ ನೀಡುವಂತೆ ಆಜ್ಞಾಪಿಸಿರುವುದನ್ನು ಆತನು ಸಂತೋಷ
ನೀಡುತ್ತಾನೆ. ಅಥವಾ ಯಾರಿಗೆ ನೀಡಬೇಕೆಂದು ತಿಳಿಸಲಾಗಿದೆಯೋ ಆತನಿಗೆ
ತ್ತಾನೆ. ಎರಡು ರೀತಿಯಲ್ಲಿಯೂ ಸೇವಕನು ಆ ದಾನದಲ್ಲಿ ಸಹಭಾಗಿಯಾಗಿರುತ್ತಾನೆ."
(ಮುಸ್ಲಿಮ್)

ಪತ್ನಿ, ಸೇವಕ, ಗುಮಾಸ್ತ ಹೀಗೆ ಯಾರೇ ಆಗಿದ್ದರೂ ಒಡೆಯನ ಅನುಮತಿಯಿಂದ
, ಅವರಿಗೆ ಹಣ ಖರ್ಚು ಮಾಡುವ ಅನುಮತಿಯಿದೆ. ಆದರೆ ಒಂದು ನಿರ್ದಿಷ್ಟ
ುಲ್ಲಿದ್ದುಕೊಂಡು ಬಡಬಗ್ಗರಿಗೆ ಸಹಾಯ ಮತ್ತು ಅವರಿಗೆ ಅನ್ನಪಾನೀಯ ನೀಡುವ
ಪತಿಗೆ ಯಾವುದೇ ಅಸಮಾಧಾನವಿಲ್ಲದಿದ್ದರೆ ಪತ್ನಿಯು ಅನುಮತಿ ಕೇಳದೆಯೇ
್ನ ಮಾಡಬಹುದು. ಅಸಮಾಧಾನದ ಅಶಂಕೆಯಿದ್ದರೆ ಎಚ್ಚರ ವಹಿಸಬೇಕು.
ಈ ಎಲ್ಲ ಆದೇಶಗಳು ಕೇವಲ ಕಾನೂನು ಪರವಾಗಿದೆ. ಆದರೆ ಪತ್ನಿ ಅಥವಾ ಸೇವಕ
ಹಣದಿಂದ ಬಡವರಿಗೆ ಏನಾದರೂ ಸಹಾಯ ಮಾಡಿದರೆ ಅದಕ್ಕಾಗಿ ಸಂತೋಷ
ವ ಮತ್ತು ಸಂತೃಪ್ತವಾಗುವ ಹೃದಯ ವೈಶಾಲ್ಯತೆಯನ್ನು ವಿಶ್ವಾಸಿಯಿಂದ ಇಸ್ಲಾಮ್
್ಸುತ್ತದೆ. ಅದಕ್ಕೆ ಅವನೂ ಪುಣ್ಯ ಫಲ ಪಡೆಯುತ್ತಾನೆ. ಅಬುಲ್ಲಹಮ್ ಎಂಬ
ನಾಮದ ಓರ್ವ ಸಹಾಬಿ ಹೇಳಿದ್ದಾರೆ, "ನನ್ನ ಒಡೆಯನಿಗಾಗಿ ನಾನು ಮಾಂಸ
ರಿಸುತ್ತಿದ್ದಾಗ ಆ ದಾರಿಯಾಗಿ ಬಂದ ಓರ್ವ ಬಡವನಿಗೆ ಆದರಿಂದ ಸ್ವಲ್ಪ ಮಾಂಸ
ದ್ದಕ್ಕಾಗಿ ಒಡೆಯನು ನನಗೆ ಹೊಡೆದನು. ನಾನು ಈ ಬಗ್ಗೆ ಪ್ರವಾದಿಯವರಿಗೆ(ಸ)
) ನೀಡಿದಾಗ ಪ್ರವಾದಿಯವರು(ಸ) ಆ ಒಡೆಯನನ್ನು ಕರೆಸಿದರು. ಹೊಡೆದ
ವನ್ನು ಕೇಳಿದಾಗ, "ನನ್ನ ಅನುಮತಿಯಿಲ್ಲದೆ ನನ್ನ ಸೊತ್ತನ್ನು ಇತರರಿಗೆ ನೀಡಿ
ಗಿ ಆತನಿಗೆ ಹೊಡೆದಿರುವೆ" ಎಂದು ಪ್ರವಾದಿಯವರಿಗೆ(ಸ) ತಿಳಿಸಿದ. ಆಗ ಪ್ರವಾದಿ
ು(ಸ) ಆ ದಾನದ ಪುಣ್ಯ ನಿಮ್ಮಿರ್ವರ ಮಧ್ಯೆ ಹಂಚಲಾಗಿದೆಯೆಂದು ಉತ್ತರಿಸಿದರು.
್ಲಿಮ್) ತನ್ನ ಒಡೆಯನು ಆಕ್ಷೇಪಿಸಲಾರನೆಂಬ ಭಾವನೆಯಿಂದ ಸೇವಕರು ದಾನ
ುವುದರಿಂದ ಆತನು ಪುಣ್ಯಕ್ಕೆ ಅರ್ಹನಾಗಿದ್ದಾನೆ. ಒಡೆಯನ ಸೊತ್ತನ್ನು ವ್ಯಯಿಸ
ುವುದರಿಂದ ಆತನನ್ನೂ ಪ್ರತಿಫಲಕ್ಕೆ ಅರ್ಹನೆಂದು ಸಾರಲಾಯಿತು.

## ುರಿಕೆ

ಮಾನವನ ಜೀವನಾವಶ್ಯಕತೆಗಳಲ್ಲಿ ನೀರು ಸುಪ್ರಧಾನವಾಗಿದೆ. ಅಲ್ಲಾಹನು ತನ್ನ
ನುಗ್ರಹವನ್ನು ಯಥೇಚ್ಛ ನೀಡಿರುವುದರಿಂದ ಅದರ ನೈಜ ಬೆಲೆ ಮತ್ತು ಮಹತ್ವವನ್ನು
ನ್ಯವಾಗಿ ಯಾರೂ ಗ್ರಹಿಸುವುದಿಲ್ಲ. ನೀರಡಿಕೆಯಿಂದ ಗಂಟಲು ಒಣಗಿದ ಸ್ಥಿತಿಯಲ್ಲಿ
ಗ ಮಾತ್ರ ನೀರಿನ ಮಹತ್ವ ಮನವರಿಕೆಯಾಗುತ್ತದೆ. ಇಸ್ಲಾಮಿ ದೃಷ್ಟಿಕೋನದಲ್ಲಿ,
ವರಿಗೆ ಆಹಾರವುಣಿಸುವಂತೆಯೇ ಬಾಯಾರಿದವನಿಗೆ ನೀರು ನೀಡುವಾತನಿಗೆ ಅಂತ್ಯ
ಲ್ಲಿ ಅಲ್ಲಾಹನು ಅಲ್ಲಿನ ಮೊಹರು ಹಾಕಿದ ನೀರನ್ನು ಕುಡಿಸುವನೆಂದು ಪ್ರವಾದಿ(ಸ)
ದ್ದಾರೆ. (ಅಬೂದಾವೂದ್, ತಿರ್ಮಿದಿ)

ಒಂದು ಹದೀಸ್‌ನಲ್ಲಿ ಹೀಗಿದೆ, "ಒಬ್ಬನು ಒಂದು ನಿರ್ಜನ ಪ್ರದೇಶ
ಸಂಚರಿಸುತ್ತಿದ್ದಾಗ ಬಾಯಾರಿಕೆಯಾಯಿತು. ಆಗ ಅವನು ಸಮೀಪದಲ್ಲಿ ಕಂಡ ಬಾವಿ
ಇಳಿದು ನೀರು ಕುಡಿದನು. ಬಾವಿಯಿಂದ ಮೇಲೆ ಬಂದಾಗ ಒಂದು ನಾಯಿಯು
ಬಾಯಾರಿಕೆಯಿಂದ ನಾಲಗೆಯನ್ನು ಹೊರ ಚಾಚಿ ಭೂಮಿಯ ಪಸೆಯನ್ನು ನೆಕ್ಕುವ
ನೋಡಿದನು. ಅವನು ಕೂಡಲೇ ಬಾವಿಗಿಳಿದು ಸ್ವಲ್ಪ ನೀರು ತೆಗೆದು ಆ ನಾ
ಕುಡಿಸಿದನು. ಅಲ್ಲಾಹನು ಅವನ ಈ ಸತ್ಕರ್ಮವನ್ನು ಸ್ವೀಕರಿಸಿ ಅದರ ಹೆಸರಲ್ಲಿ
ಪಾಪಗಳನ್ನು ಕ್ಷಮಿಸಿದನು." "ಪ್ರಾಣಿಗಳ ಸೇವೆ ಮಾಡಿದರೂ ಪ್ರತಿಫಲವೇ?" ಸಹಾ
ಅಚ್ಚರಿಯಿಂದ ಪ್ರಶ್ನಿಸಿದರು. "ಜೀವವಿರುವ ಯಾವ ಸೃಷ್ಟಿಯ ಸೇವೆ ಮಾಡಿ
ಪ್ರತಿಫಲವಿದೆ" ಎಂದು ಪ್ರವಾದಿಯವರು ಉತ್ತರಿಸಿದರು. (ಬುಖಾರಿ, ಮುಸ್ಲಿ

ಇನ್ನೊಂದು ಪ್ರವಾದಿ ವಚನದಲ್ಲಿ, ಮೂಕ ಪ್ರಾಣಿಯೊಂದಿಗೆ ಕರುಣೆ ತೋ
ಇಸ್ರೇಲಿ ಸಮುದಾಯದ ವ್ಯಭಿಚಾರಿಣಿಯೋರ್ವಳ ಪಾಪವನ್ನು ಅಲ್ಲಾಹನು ಕ್ಷಮಿ
ನೆಂದು ಹೇಳಲಾಗಿದೆ. (ಮುಸ್ಲಿಮ್) ಕೆಲವು ಗಂಭೀರ ವಿಷಯಗಳ ಕುರಿತು ಮಾರ್ಗದ
ನೀಡಿದ ಬಳಿಕ ಓರ್ವನೊಡನೆ ಪ್ರವಾದಿಯವರು(ಸ) ಹೀಗೆ ಹೇಳಿದರು, "ಆ ಕಾ
ಮಾಡಲು ನಿನಗೆ ಸಾಧ್ಯವಾಗದಿದ್ದರೆ ಹಸಿದವನಿಗೆ ಆಹಾರ ನೀಡು ಅಥವಾ ಬಾ
ದವನಿಗೆ ನೀರು ಕುಡಿಸು."

(ಅಹ್ಮದ್, ಅಲ್ ಮುಂದಿರಿ, ಇಬ್ನುಹಿಬ್ಬಾನ್, ಬೈ

## ಆಹಾರದಲ್ಲಿ ಆಂಶಿಕ ನೆರವು

ಆಹಾರ ತಯಾರಿಸಬೇಕಾದರೆ ಗೋಧಿ, ಅಕ್ಕಿ, ಬೇಳೆ, ಮಾಂಸ, ಉಪ್ಪು, 
ಸೌದೆ ಇತ್ಯಾದಿ ಅನೇಕಾರು ವಸ್ತುಗಳ ಅಗತ್ಯವಿದೆ. ಈ ಪೈಕಿ ಒಂದೆರಡು ವಸ್ತುಗ
ಅಥವಾ ಸೌದೆಯನ್ನು ದಾನ ಮಾಡಿರುವ ಆಂಶಿಕ ಸಹಾಯವೂ ಪುಣ್ಯದಾಯಕ
ಯೆಂದು ಇಸ್ಲಾಮ್ ಪರಿಗಣಿಸುತ್ತದೆ. ಇವುಗಳಲ್ಲಿ ಕೆಲವು ವಸ್ತುಗಳು ಅವಶ್ಯಾರ್ಥಿ
ನಿಷೇಧಿಸಲೇ ಬಾರದ ಸಾರ್ವಜನಿಕ ಸೊತ್ತೆಂದು ಸಾರಲಾಗಿದೆ.

ಆಯಿಶಾ(ರ) ಹೇಳುತ್ತಾರೆ: ನಿಷೇಧಿಸಬಾರದ ವಸ್ತುಗಳು ಯಾವುವೆಂದು
ವಿಚಾರಿಸಿದಾಗ ಪ್ರವಾದಿಯವರು(ಸ), "ಉಪ್ಪು, ನೀರು ಮತ್ತು ಬೆಂಕಿ" ಎಂದು ಉತ್ತರಿಸಿ
"ನೀರಿನ ಮಹತ್ವ ತಿಳಿದಿದೆ. ಆದರೆ ಉಪ್ಪು ಮತ್ತು ಬೆಂಕಿಯ ಮಹತ್ವ ತಿಳಿಯ
ನಾನು ಕೇಳಿದೆ. ಆಗ ಪ್ರವಾದಿಯವರು(ಸ) ಹೇಳಿದರು, "ಹೇ ಹುಮೈರಾ [ಆಯಿಶಾ
ಇನ್ನೊಂದು ಹೆಸರು] ಬೆಂಕಿ ದಾನ ಮಾಡಿದರೆ ಆ ಬೆಂಕಿಯಿಂದ ಅಡುಗೆ ಮ
ಆಹಾರವೆಲ್ಲವನ್ನೂ ದಾನ ಮಾಡಿದಂತೆ. ಯಾರಾದರೂ ಉಪ್ಪು ದಾನ ಮಾಡಿದ
ಉಪ್ಪಿನಿಂದ ರುಚಿಕರವಾಗುವ ಆಹಾರವೆಲ್ಲವನ್ನೂ ದಾನ ಮಾಡಿದಂತಾಗುವುದು.
ದೊರೆಯಲು ಸಾಧ್ಯವಿಲ್ಲದಿರುವೆಡೆಯಲ್ಲಿ ಒಬ್ಬನಿಗೆ ನೀರು ನೀಡಿದರೆ ಆತನನ್ನು ಬ
ದಂತಾಗುವುದು." (ಇಬ್ನುಮಾಜಃ, ತಿರ್ಮಿ

## ುಪು

ಮಾನವನ ಮೂಲಭೂತ ಜೀವನಾವಶ್ಯಕತೆಗಳಲ್ಲಿ ಆಹಾರವನ್ನು ಹೊರತುಪಡಿಸಿದರೆ ಪು ಮತ್ತು ವಸ್ತ್ರವು ಅತ್ಯಂತ ಪ್ರಧಾನವಾಗಿದೆ. ಮಾನವನ ಇತರ ಬೇಡಿಕೆಗಳಂತೆಯೇ ್ನಿ ಕೂಡಾ ಶಾಶ್ವತವಾಗಿ ಬಗೆಹರಿಸಬೇಕೆಂದು ಇಸ್ಲಾಮ್ ಬಯಸುತ್ತದೆ. ಈ ುದಲ್ಲಿರುವ ತಾತ್ಕಾಲಿಕ ಪರಿಹಾರಕ್ಕೂ ಇಸ್ಲಾಮ್ ಮಹತ್ವ ನೀಡಿದೆ. ಮೈ ಮುಚ್ಚಲು ಯಿಲ್ಲದವನಿಗೆ ಬಟ್ಟೆ ನೀಡುವ ಪುಣ್ಯದ ಕುರಿತು ಅನೇಕ ಹದೀಸ್‌ಗಳಲ್ಲಿ ವಿವರಿಸ ೆ. ಇಬ್ನು ಅಬ್ಬಾಸ್ ವರದಿ ಮಾಡಿದ್ದಾರೆ, "ಓರ್ವ ಮುಸ್ಲಿಮನಿಗೆ ವಸ್ತ್ರ ನೀಡಿದರೆ ಸ್ತ್ರದ ಒಂದು ತುಂಡಾದರೂ ಆತನಲ್ಲಿ ಉಳಿಯುವ ತನಕ ದಾನಿಯು ಅಲ್ಲಾಹನ ಕ್ಷಣೆಯಲ್ಲಿರುತ್ತಾನೆಂದು ಪ್ರವಾದಿಯವರು(ಸ) ಹೇಳಿರುವುದಾಗಿ ನಾನು ಕೇಳಿದ್ದೇನೆ." (ಮಿಷ್ಕಾತ್)

ಮಾನ ಮುಚ್ಚುವುದಕ್ಕಾಗಿ ಹೊಸ ಬಟ್ಟೆ ನೀಡಲು ಸಾಧ್ಯವಿಲ್ಲದಿದ್ದರೆ ತಾನು ಯೋಗಿಸಿದ ಬಟ್ಟೆಬರೆಯನ್ನು ಮಾತ್ರ ನೀಡಿದರೂ ಪುಣ್ಯವಿದೆ. ಉಮರ್(ರ) ವರದಿ ದ್ದಾರೆ. "ಹೊಸ ಬಟ್ಟೆ ಧರಿಸುವಾಗ ನನಗೆ ಬಟ್ಟೆ ತೊಡಿಸಿ, ಆ ಮೂಲಕ ನನ್ನ ಯನ್ನು ಮರೆಮಾಚಿ, ಜೀವನದಲ್ಲಿ ಅಲಂಕಾರವನ್ನು ದಯಪಾಲಿಸಿದ ಅಲ್ಲಾಹನಿಗೆ ಸ್ತುತಿ ಎಂದು ಪ್ರಾರ್ಥಿಸಬೇಕೆಂದು ಪ್ರವಾದಿಯವರು(ಸ) ಆದೇಶಿಸಿರುವುದನ್ನು ನಾನು ್ದೇನೆ. ಈ ರೀತಿ ಕೃತಜ್ಞತೆ ಸಲ್ಲಿಸಿದ ನಂತರ ಆ ವಸ್ತ್ರ ಹಳತಾದರೆ ದಾನ ಮಾಡಬೇಕು. ಜೀವನ ಕಾಲದಲ್ಲಿಯೂ ಮರಣದ ಬಳಿಕವೂ ಅವನನ್ನು ಅಲ್ಲಾಹನು ಸಂರಕ್ಷಿಸುತ್ತಾನೆ.

## ಯಾರ್ಥಿಗಳ ಹಕ್ಕು

ತುರ್ತು ಮತ್ತು ತಾತ್ಕಾಲಿಕ ನೆರವು ಕೇವಲ ಬಡ-ದರಿದ್ರರಿಗೆ ಮಾತ್ರವಲ್ಲ, ಉತ್ತಮ ಕ ಸ್ಥಿತಿಯಿರುವವರಿಗೂ ಕೆಲ ಸಂದರ್ಭಗಳಲ್ಲಿ ಅವಶ್ಯಕತೆಗಳಿರುತ್ತವೆ. ಆರ್ಥಿಕ ಗಿಂತ ಪರಿಸ್ಥಿತಿಗಳು ಅಂಥ ಸಹಾಯಗಳನ್ನು ಅನಿವಾರ್ಯಗೊಳಿಸುತ್ತವೆ. ಯಾತ್ರೆಯಲ್ಲಿ ಕಳೆದುಕೊಳ್ಳುವಾತನ ಸ್ಥಿತಿಯು ಅದಕ್ಕೆ ಉತ್ತಮ ಉದಾಹರಣೆಯಾಗಿದೆ. ಅಂತಹ ಗೆ ಮನೆ ತಲುಪಲು ಬೇಕಾಗುವ ಸಹಾಯ ಮಾಡಬೇಕಾದುದು ಸಮಾಜದ ್ಯವಾಗಿ ಮಾರ್ಪಡುತ್ತದೆ. ಆರ್ಥಿಕ ಸ್ಥಿತಿವಂತರು ಹಲವೊಮ್ಮೆ ಇಂಥ ಪರಿಸ್ಥಿತಿಗೆ ಾಗುತ್ತಾರೆ. ಅಂತಹ ಸಂದರ್ಭದಲ್ಲಿ ತಮ್ಮ ಬೇಡಿಕೆಯನ್ನು ಈಡೇರಿಸುವ ಹಕ್ಕು ತವಾಗಿಯೂ ಅವರಿಗಿದೆ. ಈ ವಿಷಯವನ್ನು ಒಂದು ಪ್ರವಾದಿ ವಚನದಲ್ಲಿ ಈ ಸ್ಪಷ್ಟಪಡಿಸಲಾಗಿದೆ. "ಸಹಾಯಾರ್ಥಿಯು ವಾಹನ ಹತ್ತಿ ಬಂದರೂ ನಿಮ್ಮಲ್ಲಿ ಆತನ ಳಿವೆ" (ಅಬೂದಾವೂದ್, ವರದಿ: ಇಮಾಮ್ ಹುಸೈನ್) ಸಹಾಯಾರ್ಥಿಯು ್ವಾಗಿ ಎಷ್ಟೇ ಸುಸ್ಥಿತಿಯಲ್ಲಿದ್ದರೂ ಅವನ ಬಳಿ ಸವಾರಿಗಾಗಿ ವಾಹನವೇ ಇದ್ದರೂ ಬಗ್ಗೆ ಅಪನಂಬಿಕೆಯಿರಿಸಬಾರದು, ಸದ್ಭಾವನೆಯಿರಿಸಬೇಕೆಂಬುದು ಮೇಲಿನ ಹದೀಸ್‌ನ ರ್ಥವೆಂದು ಇಮಾಮ್ ಖತ್ತಾಬಿ ಅಭಿಪ್ರಾಯಪಟ್ಟಿದ್ದಾರೆ. ಯಾಕೆಂದರೆ,

ಅನಿರೀಕ್ಷಿತವಾದ ಯಾವುದಾದರೂ ವಿಪತ್ತು ಅಥವಾ ಸಾಲವು ಆತನನ್ನು ಪೀ
ಸಾಧ್ಯತೆಯಿದೆ. ಆದ್ದರಿಂದ ಇಂಥ ಸಂದರ್ಭಗಳಲ್ಲಿ ಆತನಿಗೆ ದಾನ ಪಡೆಂ
ಅನುಮತಿಯಿದೆ. ಕೇವಲ ಬಾಹ್ಯ ನೋಟದಲ್ಲಿ ನಿರ್ಧರಿಸಿ ಅವರನ್ನು ಮರಳಿ ಕಳುಹಿಸ
ಸರಿಯಲ್ಲ. (ಮುಆಲಿಮುಸ್ಲ

ಇಸ್ಲಾಮ್ ಭಿಕ್ಷಾಟನೆಯಿಂದ ತಡೆಯುತ್ತದೆ. ಅದೇ ರೀತಿ ಅಭ್ಯಾಸಿ ಭಿಕ್ಷು
ಖಂಡಿಸುತ್ತದೆ. ಹಾಗಿದ್ದರೂ ಓರ್ವನು ಏನಾದರೂ ಅತ್ಯಾವಶ್ಯಕತೆಗಳಿಗಾಗಿ ಕೈಚಾ
ಸಾಧ್ಯವಿರುವ ರೀತಿಯಲ್ಲಿ ಅಂತಹವನ ಬೇಡಿಕೆಯನ್ನು ಈಡೇರಿಸಬೇಕೆಂದೂ ಆದೇಶಿಸ

ಉಮ್ಮು ಬಿಜಯ್ಯಿದ್ ಒಮ್ಮೆ ಪ್ರವಾದಿವರ್ಯರೊಂದಿಗೆ, ಪ್ರವಾದಿವಂ
ಅಪೇಕ್ಷಿತನಾರಾದರೂ ಮನೆ ಬಾಗಿಲಿಗೆ ಬಂದಾಗ ನನ್ನ ಬಳಿ ಆತನಿಗೆ ನೀಡಲು
ಇರುವುದಿಲ್ಲ. ಆಗ ತುಂಬಾ ನಾಚಿಕೆಯಾಗುತ್ತದೆ ಎಂದು ಹೇಳಿದಾಗ, ಪ್ರವಾದಿವರ್ಯ
ಬೇಡುವವನನ್ನು ಬರಿಗೈಯಲ್ಲಿ ಮರಳಿಸದಿರು. ಏನೂ ಇಲ್ಲದಿದ್ದರೆ ಒಣರೊಟ್ಟಿಯನ್ನಾ
ನೀಡು ಎಂದರು. (ಅಬೂದಾವೂದ್, ತಿ

ಸಹಾಯಾರ್ಥಿಯೊಂದಿಗಿನ ಧೋರಣೆಯ ಉದಾತ್ತ ಮಾದರಿಯನ್ನು ಈ
ಘಟನೆಗಳಿಂದ ತಿಳಿಯಬಹುದು. "ಇಂದು ಯಾರಾದರೂ ದರಿದ್ರನಿಗೆ ಆಹಾರ ನೀಡಿ
ಎಂಬ ಪ್ರವಾದಿಯವರ ಪ್ರಶ್ನೆ ಕೇಳಿ, ಮಸೀದಿಗೆ ಆಗಮಿಸಿದ ಅಬೂಬಕರ್‌ರು ಅಲ್ಲಿ
ಸಹಾಯಾರ್ಥಿಯನ್ನು ನೋಡಿ ತನ್ನ ಪುತ್ರ ಅಬ್ದುರ್ರಹ್ಮಾನ್ ತಿನ್ನುತ್ತಿದ್ದ ರೊಟ್ಟಿ
ಆತನ ಕೈಯಿಂದ ಪಡೆದು ಆ ಭಿಕ್ಷುಕನಿಗೆ ನೀಡಿದರು. (ಅಬೂದಾ

## ರೋಗಿಯ ಸಂದರ್ಶನ

ಅಪಾಯದಲ್ಲಿ ಸಿಲುಕಿದವರಿಗೂ ಕಠಿಣ ರೋಗ ಪೀಡಿತರಿಗೂ ಹಲವೊಮ್ಮೆ
ನೆರವಿನ ಅಗತ್ಯವಿರುತ್ತದೆ. ಆ ನೆರವಿನಲ್ಲಿ ಏನಾದರೂ ತಡವಾಗಿ ಬಿಟ್ಟರೆ ಅದರ
ಅವರ ಪರಿಸ್ಥಿತಿಯು ಬಿಗಡಾಯಿಸಿ ಜೀವಕ್ಕೆ ಅಪಾಯ ಸಂಭವಿಸುವ ಸಾಧ್ಯತ
ರೋಗಿಯ ಸಂದರ್ಶನ ಮತ್ತು ಶುಶ್ರೂಷೆ ಹಾಗೂ ಜನಾಝಾ ಸಂಸ್ಕರಣೆಗಳು ಮು
ಪರಸ್ಪರ ಹಕ್ಕುಗಳಲ್ಲಿ ಸೇರಿವೆಯೆಂದು ಪ್ರವಾದಿ(ಸ) ಹೇಳಿದ್ದಾರೆ.

(ಬುಖಾರಿ, ಮು

ರೋಗಿಯ ಸಂದರ್ಶನ ಮತ್ತು ಸೇವೆಯು ಕೆಲ ಸಂದರ್ಭಗಳಲ್ಲಿ ಕಾನೂ
ಕರ್ತವ್ಯವಾಗುತ್ತದೆ. ಸೂಕ್ತ ಸಂದರ್ಭದಲ್ಲಿ ಆ ಕರ್ತವ್ಯವನ್ನು ಈಡೇರಿಸುವಾತನು ಶರಿ
ದೃಷ್ಟಿಯಲ್ಲಿ ಭಾರಿ ಪುಣ್ಯಫಲಕ್ಕೆ ಅರ್ಹನಾಗುತ್ತಾನೆ.

## ಸಕಲ ಸಮಸ್ಯೆಗಳಿಗೆ ಶಾಶ್ವತ ಪರಿಹಾರ

ಏನಾದರೂ ಸಹಾಯ ಯಾಚಿಸಿ ಬರುವವರಿಗೆ ಒಂದಿಷ್ಟು ಹಣ ನೀ
ವಾಗುವುದು. ಹಸಿದವನಿಗೆ ಎಂದಾದರೂ ಹೊಟ್ಟೆ ತುಂಬಾ ಆಹಾರ ನೀಡುವುದು,

ಮಾಚಲು ಗತಿಯಿಲ್ಲದವನಿಗೆ ಅಗತ್ಯವಿರುವ ಬಟ್ಟೆಬರೆ ನೀಡುವುದು ಇತ್ಯಾದಿ ಕಾರ್ಯ
ಲ್ಲವೂ ದೊಡ್ಡ ಪುಣ್ಯ ಕರ್ಮವೆಂಬುದರಲ್ಲಿ ಸಂಶಯವಿಲ್ಲ. ನಮ್ಮಲ್ಲಿ ಹೆಚ್ಚಿನವರಿಗೆ
ಹನು ಸೇವೆಯ ಈ ಸೌಭಾಗ್ಯವನ್ನು ನೀಡಿದ್ದಾನೆ. ಆದರೆ ಸೇವೆಯೆಂದರೆ ಕೇವಲ
ಕ್ಕೇ ಸೀಮಿತವಾಗಿದೆಯೇ? ಕೇವಲ ಅವುಗಳಿಂದ ನಮ್ಮ ಕರ್ತವ್ಯ ಈಡೇರುವುದೇ?
ಗಂಭೀರವಾಗಿ ಆಲೋಚಿಸಬೇಕಾದ ಪ್ರಶ್ನೆಗಳಾಗಿವೆ.

ಅವಶ್ಯಾರ್ಥಿಗಳಿಗೆ ತಾತ್ಕಾಲಿಕವಾಗಿ ಮಾಡಿ ಕೊಡುವ ಸಣ್ಣ ದೊಡ್ಡ ರೀತಿಯ
ಯಗಳಿಗೂ ಖಂಡಿತವಾಗಿಯೂ ತಕ್ಕ ಪ್ರತಿಫಲವಿದೆ. ಆವಶ್ಯಕತೆಯು ತಾತ್ಕಾಲಿಕವಲ್ಲ
ರೆ ಸಹಜವಾಗಿಯೂ ಆ ಬೇಡಿಕೆ ಅಸ್ತಿತ್ವದಲ್ಲಿರುವ ತನಕ ನೆರವು ಮುಂದುವರಿಸ
ಗುತ್ತದೆ. ಓರ್ವನ ಸಂಕಷ್ಟಗಳ ಪರಿಹಾರಕ್ಕೆ ಬಹುದೊಡ್ಡ ಸಹಾಯದ ಅಗತ್ಯವಿದೆ
ವಾ ದೀರ್ಘ ಕಾಲದ ನೆರವಿನ ಅಗತ್ಯವಿದೆಯೆಂದಾದರೆ ಅಂಥವರಿಗೆ ಅದೇ ರೀತಿಯ
ವು ನೀಡಬೇಕು. ಅನೇಕ ಜಟಿಲ ಸಮಸ್ಯೆಗಳ ಸುಳಿಯಲ್ಲಿರುವ ಓರ್ವನ ಸಂಕಷ್ಟವು
ಂದ ಮುಕ್ತವಾಗುವುದಕ್ಕೆ ಅಗತ್ಯವಿರುವ ಸೌಲಭ್ಯಗಳು ದೊರೆತಾಗ ಮಾತ್ರ ಪರಿಹಾರ
ತ್ತದೆ. ಅವರ ಸಮಸ್ಯೆಗಳು ಶಾಶ್ವತವಾಗಿ ಪರಿಹಾರಗೊಂಡು, ಯಾವ ಕಾರಣಕ್ಕಾಗಿ
ು ಜೀವನದಲ್ಲಿ ಸಂಕಷ್ಟ ಅನುಭವಿಸುತ್ತಿರುವರೋ ಅವುಗಳನ್ನು ಕಂಡು ಹಿಡಿದು
ಕರಿಸಬೇಕು. ಸ್ವಂತ ಬೇಡಿಕೆಗಳ ನಿರ್ವಹಣೆಗಾಗಿ ಇತರರ ನೆರವು ಅಥವಾ ಆಶ್ರಯ
ು ಬೇಕಾಗಿಲ್ಲದಂಥ ಪರಿಸ್ಥಿತಿಯನ್ನು ಸೃಷ್ಟಿಸುವುದರಿಂದ ಮಾತ್ರ ಅಂಥವರ ಸೇವೆ
ತ್ತು ಸಹಾಯವು ಪೂರ್ಣವಾಗುತ್ತದೆ. ಹೀಗೆ ಆಲೋಚಿಸುವಾಗ ಜನಸೇವೆಯ ಬಗೆಗಿನ
ಕಲ್ಪನೆಯು ಬದಲಾಗಬಹುದು. ಹಾಗೆಯೇ ನಾವು ಅದರ ವಿಶಾಲವಾದ ಬೇಡಿಕೆಗಳ
ಆಲೋಚಿಸಬಹುದು.

## ವರ ಮತ್ತು ವಿಧವೆಯರ ಸೇವೆಯ ವಿಶಾಲ ಕಲ್ಪನೆ

ಬಡ ದರಿದ್ರರಿಗೆ ಒಂದು ಹೊತ್ತಿನ ಆಹಾರ ನೀಡುವುದು ಪ್ರತಿಫಲಾರ್ಹ ಕರ್ಮ
ು ಹೇಳಿದೆಯಷ್ಟೆ. ಅದರ ಪುಣ್ಯವನ್ನು ಕುರ್‌ಆನ್ ಮತ್ತು ಹದೀಸ್‌ಗಳಲ್ಲಿ ವಿವರಿಸಿ,
ಕ್ಕೆ ಪ್ರೋತ್ಸಾಹ ನೀಡಲಾಗಿವೆ. ಆದರೆ ಓರ್ವ ಬಡವ ಮತ್ತು ನಿರ್ಗತಿಕನಾಗಿರುವ ತನಕ
ರ ಹಕ್ಕುಗಳು ಉಳಿಯುತ್ತವೆ. ಆದ್ದರಿಂದಲೇ ಸಮಾಜದಲ್ಲಿ ಶಾಂತಿ ಮತ್ತು ಘನತೆ
ಂದ ಬಾಳುವಂತಾಗುವ ತನಕ ಆತನ ದಾರಿದ್ರ್ಯಕ್ಕೆ ಪರಿಹಾರ ಒದಗಿಸಬೇಕಾದುದು ವ್ಯಕ್ತಿ
ತ್ತು ರಾಷ್ಟ್ರದ ಕರ್ತವ್ಯವಾಗಿ ಮಾರ್ಪಡುತ್ತದೆ. ಪ್ರವಾದಿಯವರು(ಸ) ಹೀಗೆಂದಿದ್ದಾರೆ,
ವೆಯರು ಮತ್ತು ಬಡವರಿಗಾಗಿ ದುಡಿಯುವವರು, ಅಲ್ಲಾಹನ ಮಾರ್ಗದಲ್ಲಿ
ರಾಟ ನಡೆಸುವ ಮತ್ತು ರಾತ್ರಿಯಲ್ಲಿ ನಮಾಝ್ ಮಾಡುವ ಹಾಗೂ ಹಗಲಿನಲ್ಲಿ
ವಾಸ ಆಚರಿಸುವವರಿಗೆ ಸಮಾನರಾಗಿದ್ದಾರೆ."

(ಬುಖಾರಿ)

ಬಡವರು ಮತ್ತು ವಿಧವೆಯರ ಕ್ಷೇಮಾಭಿವೃದ್ಧಿಯ ಧ್ಯೇಯದಿಂದ ಆವಶ್ಯಕ
ಈಡೇರಿಕೆ, ಉದ್ಯೋಗಾವಕಾಶಗಳ ಸೃಷ್ಟಿ, ಘನತೆ ಮತ್ತು ಗೌರವದಿಂದ ಬಾಳು
ಮಾಡುವುದು ಇತ್ಯಾದಿ ಎಲ್ಲ ವಿಷಯಗಳೂ ಈ ಹದೀಸ್‌ನಲ್ಲಿ ಹೇಳಿದ ದುಡಿಮೆ
ಸೇರಿದೆ.

ಈ ಹದೀಸನ್ನು ವ್ಯಾಖ್ಯಾನಿಸುತ್ತಾ ಇಮಾಮ್ ನವವಿಯವರು ಹೀಗೆಂದಿ
"ಅವರ ಮೂಲ ಬೇಡಿಕೆಗಳ ಈಡೇರಿಕೆ ಮತ್ತು ಉಪಜೀವನಕ್ಕಾಗಿ ಕಾರ್ಯನಿರತ
ವವನೇ ಬಡವರು ಮತ್ತು ವಿಧವೆಯರಿಗಾಗಿ ದುಡಿದು ಪರಿಶ್ರಮಪಡುವವ."

ಬಡವರು ಮತ್ತು ಆವಶ್ಯಾರ್ಥಿಗಳಲ್ಲಿ 2 ವಿಧವಿದೆ. ತಮ್ಮ ಬೇಡಿಕೆಗ
ಯಾವುದೇ ಸಂಕೋಚವಿಲ್ಲದೆ ಹೇಳಿ ಬಹಿರಂಗವಾಗಿ ಬೇಡುವ ವಿಭಾಗ ಒಂದಾದರೆ
ಬೇಡಿಕೆಗಳನ್ನು ಇತರರ ಮುಂದೆ ಹೇಳಲು ಸಂಕೋಚಪಡುವ ಹಾಗೂ ಆ ಮ
ಘನತೆ ಗೌರವಗಳನ್ನು ಕಳೆದುಕೊಳ್ಳಲು ಸಿದ್ಧರಿಲ್ಲದ 2ನೇ ವಿಭಾಗ. ಈ ಎ
ವಿಭಾಗದ ಜನರು ಸಮಾಜದ ಗಮನ ಮತ್ತು ಉಪಚಾರಕ್ಕೆ ಅರ್ಹರಾಗಿದ್ದಾರೆ.
ಅಗತ್ಯಗಳನ್ನು ಈಡೇರಿಸಲು ಹೆಚ್ಚು ಚಿಂತಿಸಬೇಕು. (ಫತ್ಹುಲ್

## ಅನಾಥ ಸಂರಕ್ಷಣೆಯ ಬೇಡಿಕೆ

ಅನಾಥರೊಂದಿಗೆ ಉತ್ತಮ ರೀತಿಯಲ್ಲಿ ವರ್ತಿಸಬೇಕೆಂದು ಕುರ್‌ಆನ್
ಹದೀಸ್‌ಗಳು ಪದೇಪದೇ ಒತ್ತಿ ಹೇಳಿದ್ದನ್ನು ನಾವು ನೋಡಿದ್ದೇವಷ್ಟೆ. ಈ ಸದ್ವರ್ತ
ತಾತ್ಕಾಲಿಕವಾಗಿದ್ದರೂ ಆರ್ಥಿಕ ಸ್ಥಿತಿ ಸುಧಾರಣೆಗೆ ಅರ್ಹಗೊಳಿಸಿ ಅವರನ್ನು ಧಾ
ಮತ್ತು ನೈತಿಕವಾಗಿ ಸಮಾಜದ ಓರ್ವ ಉತ್ತಮ ಪೌರನಾಗಿ ಮಾರ್ಪಡಿಸಿದರೆ ಮಾತ್ರ
ಸದ್ವರ್ತನೆಯ ವಿಶಾಲ ಬೇಡಿಕೆಯು ಸುರಕ್ಷಿತವಾಗುತ್ತದೆ. ಅನಾಥ ಸಂರಕ್ಷಣೆಯ ವಿಶಾ
ವನ್ನು ಈ ಕೆಳಗಿನ ಹದೀಸ್‌ನಿಂದ ತಿಳಿಯಬಹುದು. "ಅನಾಥ ಸಂರಕ್ಷಣೆಯ ಹೊಣೆ
ವಹಿಸಿದವರು ಮತ್ತು ನಾನು, ಅವರು ನಮ್ಮ ಕುಟುಂಬದವರಾಗಿರಲಿ, ಅನ್ಯರಾ
ಸ್ವರ್ಗದಲ್ಲಿ ಈ ಎರಡು ಬೆರಳುಗಳಂತೆ ನಿಕಟವಾಗಿರುತ್ತೇವೆ." (ಮುಸ್ಲಿ

ಮೇಲಿನ ಹದೀಸ್‌ನ ಮೂಲದಲ್ಲಿರುವ 'ಕಫಾಲತ್' (ಸಂರಕ್ಷಣೆ) ಎಂಬ
ಬಹಳ ಮುಖ್ಯವಾಗಿದೆ. ಅವರ ಉಪಚಾರ, ಶಿಕ್ಷಣ, ತರಬೇತಿ, ಉಪಜೀವನದ ವ
ಇತ್ಯಾದಿ ಎಲ್ಲವೂ ಅದರಲ್ಲಿ ಸೇರಿದೆ. ಇಮಾಮ್ ನವವಿ ಅದನ್ನು ಹೀಗೆ ವ್ಯಾಖ್ಯಾನಿಸಿ
"ಅನಾಥರಿಗೆ ಆಹಾರ, ಬಟ್ಟೆ ಬರೆ, ವಿದ್ಯಾಭ್ಯಾಸ, ಶಿಕ್ಷಣ ಮುಂತಾದ ಜವಾಬ್ದಾರಿ
ವಹಿಸಿ ನಿರ್ವಹಿಸುವುದೇ ಅನಾಥ ಸಂರಕ್ಷಣೆಯಾಗಿದೆ. ಸ್ವಂತ ಹಣದಿಂದ ಅವ
ಸಂರಕ್ಷಿಸುವಾತನೂ, ಮೇಲ್ನೋಟ ವಹಿಸಲಿಕ್ಕಾಗಿ ಶರೀಅತ್ ಹೊಣೆಗಾರಿಕೆ ನಿ
ವವನಿಗೂ ಅನಾಥರ ಹಣದಿಂದಲೇ ಅವರನ್ನು ಸಂರಕ್ಷಿಸುವವರಿಗೂ ಇದೇ ಶ್ರೇ
ದೊರೆಯುತ್ತದೆ."

ಅನಾಥರ ಬೇಡಿಕೆಯನ್ನು ಈಡೇರಿಸಿದಂತೆಯೇ ಅದಕ್ಕೆ ತಕ್ಕ ಪುಣ್ಯ ಮತ್ತು
ಃಷ್ಮತೆಗೆ ಆತನು ಅರ್ಹನಾಗುತ್ತಾನೆ. ಅನಾಥರ ಹಕ್ಕುಗಳನ್ನು ಸರಿಯಾದ ಅರ್ಥದಲ್ಲಿ
ಡೇರಿಸಿದರೆ ಮಾತ್ರ ಅನಾಥರ ಸಂರಕ್ಷಕರಿಗೆ ಸ್ವರ್ಗದಲ್ಲಿ ದೇವ ಸಂದೇಶವಾಹಕರ(ಸ)
ಮೀಪ್ಯ ದೊರೆಯುವುದು.

## ರ್ಮಿಕನಿಗೆ ಪ್ರೋತ್ಸಾಹ

ಹಜ್ಜತುಲ್ ವಿದಾಅ್‌ನ(ವಿದಾಯ ಹಜ್ಜ್) ಸಂದರ್ಭದಲ್ಲಿ ಝಕಾತ್‌ನ ಸೊತ್ತುಗಳನ್ನು
ಕರಿಸುವಾಗ ಇಬ್ಬರು ಬಂದು ತಮಗೂ ಏನಾದರೂ ಕೊಡಬೇಕೆಂದು ವಿನಂತಿಸಿದರು.
ಗಂತುಕರ ಆರೋಗ್ಯ, ದೃಢಕಾಯವನ್ನು ನೋಡಿ ಪ್ರವಾದಿ(ಸ) ಸ್ವಲ್ಪ ಸಿಟ್ಟಿನಿಂದ
ಳಿದರು, "ನೀವು ಕೇಳುವುದಿದ್ದರೆ ದಾನದ ಹಣವನ್ನು ನಿಮಗೆ ನೀಡಲು ನನ್ನದೇನೂ
ಕ್ಷೇಪವಿಲ್ಲ. ಆದರೆ ಶ್ರೀಮಂತರು ಮತ್ತು ಆರೋಗ್ಯವಂತರಿಗೆ ದಾನದ ಸಂಪತ್ತಿನಲ್ಲಿ
ಲಿಲ್ಲವೆಂಬ ಸತ್ಯವನ್ನು ನೀವು ತಿಳಿದಿರಬೇಕು." (ಅಬೂದಾವೂದ್) ದುಡಿಯಬಲ್ಲ
ರೋಗ್ಯವಂತರಿಗೆ ಝಕಾತ್‌ನಲ್ಲಿ ಪಾಲಿಲ್ಲವೆಂಬುದೇ ಈ ಹದೀಸ್‌ನ ಸಾರಾಂಶ.
ಮಾಮ್ ಖತ್ತಾಬಿ ಹೀಗೆ ವಿಶ್ಲೇಷಿಸಿದ್ದಾರೆ. "ಬಾಹ್ಯ ನೋಟಕ್ಕೆ ಆರೋಗ್ಯವಂತನೆಂದು
ಡ ಮಾತ್ರಕ್ಕೆ ಒಬ್ಬನಿಗೆ ಝಕಾತ್ ನಿಷೇಧಿಸಬಾರದು. ಏಕೆಂದರೆ ಬಾಹ್ಯವಾಗಿ ಆರೋಗ್ಯ
ಲಿಗಳಂತೆ ಕಾಣುವವರಲ್ಲಿ ಕೆಲವರು ಸಹಜವಾಗಿ ಕೆಲಸ ಮಾಡಲು ಅಶಕ್ತರಾಗಿರಬಹುದು.
ಥ ಮಂದಿಗೆ ಝಕಾತ್‌ನಲ್ಲಿ ಹಕ್ಕಿದೆ. ಅದನ್ನು ನಿಷೇಧಿಸ ಬಾರದೆಂದು ಈ ಪ್ರವಾದಿ
ತನದಿಂದ ವ್ಯಕ್ತವಾಗುತ್ತದೆ." (ಮುಆಲಿಮುಸ್ಸುನನ್ 2/62)

ಆದ್ದರಿಂದ ಉತ್ತಮ ಆರೋಗ್ಯವಂತ ಮತ್ತು ಬಲಿಷ್ಠವಾಗಿದ್ದರೂ ಅವರಿಗೆ ಕೆಲಸ
ಾಡಲು ಸಾಧ್ಯವಿಲ್ಲದಿದ್ದರೆ, ಮಾಡುವ ಕೆಲಸದಿಂದ ಅಗತ್ಯವಿರುವ ಸಂಪಾದನೆಯಾಗ
ದ್ದರೆ ಅವರಿಗೆ ದಾನ ಧರ್ಮಗಳಿಂದ ನೆರವು ನೀಡಿ ಅವರ ಬೇಡಿಕೆಗಳನ್ನು ಈಡೇರಿಸ
ಕೆಂಬುದೇ ಇದರ ತಾತ್ಪರ್ಯ. ಚೆನ್ನಾಗಿ ದುಡಿಯುವ, ಆರೋಗ್ಯವಿದ್ದರೂ ಹಣವಿಲ್ಲದ
ರಣದಿಂದ ಉಪಜೀವನ ಮಾರ್ಗವನ್ನು ಕಂಡು ಹಿಡಿಯಲಾಗದೆ ಕಷ್ಟಪಡುವ ಅನೇಕ
ುವಕರು ನಮ್ಮ ಮಧ್ಯೆ ಇದ್ದಾರೆ. ಎಲ್ಲಿಂದಾದರೂ ಸ್ವಲ್ಪ ಹಣ ದೊರೆತರೆ ಆ ಪೈಕಿ
ಕ್ಟಿನವರು ಸ್ವಉದ್ಯೋಗವನ್ನು ಮಾಡಬಲ್ಲರು. ಆರ್ಥಿಕ ಸ್ಥಿತಿಯನ್ನು ಉತ್ತಮಪಡಿಸ
ಲ್ಲರು. ದೌರ್ಭಾಗ್ಯವಶಾತ್, ನಮ್ಮ ಸಮಾಜದ ಕೈಯಲ್ಲಿ ಅದಕ್ಕೆ ಬೇಕಾದ ಯಾವ
ೋಜನೆಯೂ ಇಲ್ಲ. ಅದರ ಅಗತ್ಯವಿದೆಯೆಂದು ಭಾವಿಸುವವರೂ ವಿರಳ.

## ದ್ಯೋಗಕ್ಕೆ ನೆರವು

ಪ್ರವಾದಿಯವರೊಂದಿಗೆ(ಸ) ನಡೆಸಿದ ತನ್ನ ಸಂಭಾಷಣೆಯೊಂದನ್ನು ಪ್ರಮುಖ
ಾಬಿ ಅಬೂದರ್ರ್ ಹೀಗೆ ಉಲ್ಲೇಖಿಸಿದ್ದಾರೆ, "ಅತ್ಯಂತ ಪುಣ್ಯದಾಯಕ ಮತ್ತು
ಷ್ಠವಾದ ಕರ್ಮ ಯಾವುದೆಂದು ನಾನು ಕೇಳಿದೆ. 'ಅಲ್ಲಾಹನ ಮೇಲಿರುವ ವಿಶ್ವಾಸ

ಮತ್ತು ಆತನ ಮಾರ್ಗದಲ್ಲಿ ಹೋರಾಟ' ಎಂದು ಪ್ರವಾದಿಯವರು(ಸ) ಉತ್ತರಿಸಿದ
'ಯಾವ ರೀತಿಯ ಗುಲಾಮನನ್ನು ಸ್ವತಂತ್ರಗೊಳಿಸುವುದು ಅತ್ಯುತ್ತಮ ಮತ್ತು ಪುಣ್ಯದಾಯ
ವೆಂದು ನಾನು ಪುನಃ ಕೇಳಿದೆ. 'ಹೆಚ್ಚಿನ ಬೆಲೆಯಿರುವ ಮತ್ತು ಮಾಲಿಕನಿಗೆ ಅ
ಪ್ರಿಯನಾಗಿರುವ ಗುಲಾಮನನ್ನು' ಎಂದು ಪ್ರವಾದಿ(ಸ) ಹೇಳಿದರು. ನಾನು ಪುನಃ ಕೇಳಿ
'ನನಗೆ ಅದು ಸಾಧ್ಯವಿಲ್ಲದಿದ್ದರೆ?' ಪ್ರವಾದಿ(ಸ) ಹೇಳಿದರು, 'ಬಡತನದಿಂದಾಗಿ ಮಕ್ಕಳ
ಕಳೆದುಕೊಳ್ಳುತ್ತಿರುವ ಅಥವಾ ತನ್ನ ಕೆಲಸವನ್ನು ಮಾಡಲು ಸಾಧ್ಯವಿಲ್ಲದ ವ್ಯಕ್ತಿ
ನೆರವಾಗುವುದು. 'ಅದೂ ಸಾಧ್ಯವಿಲ್ಲದಿದ್ದರೆ?' ನಾನು ಕೇಳಿದೆ. ತನ್ನ ಕೆಡುಕಿನಿಂದ ಜನರ
ರಕ್ಷಿಸುವ ಕೆಲಸವನ್ನಾದರೂ ಮಾಡು. ಅದು ತನಗೇ ಮಾಡುವ ಒಂದು ರೀತಿ
ದಾನವಾಗಿದೆ." ಎಂದು ಪ್ರವಾದಿ(ಸ) ಹೇಳಿದರು. (ಬುಖಾರಿ, ಮುಸ್ಲಿಮ

ಈ ಹದೀಸ್‌ನಲ್ಲಿ ಮೊದಲು ಅಲ್ಲಾಹನ ಮೇಲಿನ ವಿಶ್ವಾಸ, ಆತನ ಮಾರ್ಗದ
ಹೋರಾಟ ಮತ್ತು ಗುಲಾಮರ ವಿಮೋಚನೆಯನ್ನು ಪ್ರಸ್ತಾಪಿಸಿದ ಬಳಿಕ ಜೀವನೋಪಾಯ
ದಾರಿಗಾಣದೆ ಹಸಿವೆಯಿಂದ ಮರಣವನ್ನು ಎದುರಿಸುತ್ತಿರುವ ಕುಟುಂಬಗಳಿಗೆ ಆವಶ
ನೆರವು ನೀಡಿ ಅದರಿಂದ ಪಾರುಗೊಳಿಸಬೇಕು. ಇದನ್ನೇ ಪ್ರವಾದಿಯವರು(ಸ) ಬಡ
ದಿಂದ ಮಕ್ಕಳನ್ನು ಕಳೆದುಕೊಳ್ಳುವವರಿಗೆ ನೆರವಾಗಿರಿ ಎಂದು ಹೇಳಿರುವುದಾಗಿದೆ.
ನೆರವಿನ ಪ್ರಮಾಣ ಮತ್ತು ಸ್ವರೂಪವನ್ನು ನಿಶ್ಚಯಿಸಲಾಗಿಲ್ಲ. ಅದು ನೆರವು ಪಡೆ
ವವನ ಸ್ಥಿತಿ ಮತ್ತು ನೆರವು ನೀಡುವವನ ಆರ್ಥಿಕ ಸಾಮರ್ಥ್ಯವನ್ನು ಅವಲಂಬಿಸಿ
ಇನ್ನೊಂದು ವರದಿ ಪ್ರಕಾರ ವ್ಯಾಪಾರ, ವೃತ್ತಿ ಇರುವವರಿಗೂ ನೆರವಾಗಬಹುದು. ಆರ್ಥಿ
ನೆರವು, ಯಂತ್ರಗಳ ಸರಬರಾಜು, ವ್ಯಾಪಾರಿ ಸರಕುಗಳಿಗೆ ಮಾರುಕಟ್ಟೆ ಒದಗಿಸುವು
ಇತ್ಯಾದಿ ಸೇವೆಗಳನ್ನು ಉದ್ಯೋಗಿ ಮತ್ತು ವ್ಯಾಪಾರಿಗಳಿಗೆ ಒದಗಿಸಬಹುದಾಗಿದೆ. ಹೆಚ್ಚಾ
ಇಂತಹ ವಿಷಯಗಳ ಕಡೆಗೆ ಜನರ ಗಮನ ಹರಿಯುವುದಿಲ್ಲ. ಉದ್ಯೋಗದಲ್ಲಿ ಪರಿ
ಕಡಿಮೆಯಿರುವವರಿಗೂ ಅದರಲ್ಲಿ ನೆರವಾಗಿರಿ ಎಂಬ ಹದೀಸ್‌ನ ಮುಂದಿನ ಭಾಗವು
ಕಾಲದಲ್ಲಿ ಬಹಳ ಪ್ರಸ್ತುತ ಮತ್ತು ಮಹತ್ವಪೂರ್ಣವಾಗಿದೆ. ಇಂಥ ಸೇವಾ ಮನೋಭಾವ
ಸಮಾಜದಲ್ಲಿ ಬೇರೂರಿ ಉದ್ಯೋಗ ತರಬೇತಿ ದೊರೆತಿಲ್ಲದವರಿಗೆ ಸಮರ್ಥ ಉದ್ಯೋ
ತರಬೇತಿ ಕೇಂದ್ರಗಳನ್ನು ಸ್ಥಾಪಿಸಬೇಕು, ಹಾಗಾದರೆ ಅದು ಜನಸೇವೆಯ ಅತ್ಯುತ್ತ
ರೂಪವಾಗಿ ಮಾರ್ಪಡುವುದು. ಈ ಮೂಲಕ ದುರ್ಬಲ ವರ್ಗಗಳ ಆರ್ಥಿಕ ಸಮಸ್ಯೆಗಳ
ಒಂದು ಮಿತಿಯ ವರೆಗೆ ಬಗೆಹರಿಸಬಹುದು.

## ಸೇವೆಯ ಕೆಲವು ನಿರ್ದಿಷ್ಟ ರೂಪಗಳು

ತಾತ್ಕಾಲಿಕ, ತುರ್ತು ಮತ್ತು ಶಾಶ್ವತ ಸೇವೆಯ ಜತೆಯಲ್ಲಿ ಸೇವೆಯ ಇತರ ಕೆ
ನಿರ್ದಿಷ್ಟ ಅಂಶಗಳೆಡೆಗೂ ಕುರ್‌ಆನ್ ಮತ್ತು ಹದೀಸ್ ಬೆಳಕು ಚೆಲ್ಲಿದೆ. ಅದು ಸಮಾ
ಉನ್ನತಿಗೆ ಅತ್ಯಾವಶ್ಯಕವಾಗಿದ್ದು ಆರ್ಥಿಕ, ಸಾಮಾಜಿಕ ಮತ್ತು ದೂರಗಾಮಿ ಪ್ರಭಾವವ
ಹೊಂದಿದೆ.

## ಆರ್ಥಿಕ ನೆರವು

ಆರ್ಥಿಕ ಸಹಾಯ ಸೇವೆಯ ಇನ್ನೊಂದು ರೂಪವಾಗಿದ್ದು ಅದರ ಪ್ರಾಮುಖ್ಯತೆಯ
ಗ್ಗೆ ಯಾರೂ ಹೇಳಿಕೊಡಬೇಕಾಗಿಲ್ಲ. ಕೌಟುಂಬಿಕ ಹಕ್ಕುಗಳನ್ನು ಅನುಮತಿಸಬೇಕು
ುತ್ತು ದುರ್ಬಲರು, ಅಸಹಾಯಕರು, ನಿರಾಶ್ರಿತರಿಗೆ ಆರ್ಥಿಕ ನೆರವು ನೀಡಬೇಕೆಂದು
ುರ್‌ಆನ್ ಒತ್ತಿ ಹೇಳಿದೆ:

"ನೀವು ನಿಮ್ಮ ಮುಖಗಳನ್ನು ಪೂರ್ವದಿಕ್ಕಿಗೆ ಅಥವಾ ಪಶ್ಚಿಮ ದಿಕ್ಕಿಗೆ ಮಾಡಿ
ೂಳ್ಳುವುದು ಧರ್ಮಶೀಲತೆಯಲ್ಲ. ನಿಜವಾಗಿ ಒಬ್ಬನು ಅಲ್ಲಾಹನನ್ನೂ ನಿರ್ಣಾಯಕ
ನವನ್ನೂ ದೇವಚರರನ್ನೂ ಅಲ್ಲಾಹನು ಅವತೀರ್ಣಗೊಳಿಸಿದ ಗ್ರಂಥವನ್ನೂ ಅವ
ಂದೇಶವಾಹಕರನ್ನೂ ಹೃತ್ಪೂರ್ವಕ ಒಪ್ಪಿಕೊಳ್ಳುವುದೂ ಅಲ್ಲಾಹನ ಸಂಪ್ರೀತಿಗಾಗಿ
ನ್ನ ಮನಮೆಚ್ಚುಗೆಯ ಸಂಪತ್ತನ್ನು ಬಂಧುಗಳಿಗೂ ಅನಾಥರಿಗೂ ನಿರ್ಗತಿಕರಿಗೂ
ಪ್ರಯಾಣಿಕರಿಗೂ ಸಹಾಯಾರ್ಥಿಗಳಿಗೂ ದಾಸ್ಯ ವಿಮೋಚನೆಗಾಗಿಯೂ ವ್ಯಯಿಸುವುದೂ
ಮಾಝನ್ನು ಸಂಸ್ಥಾಪಿಸುವುದೂ ಝಕಾತ್(ಕಡ್ಡಾಯದಾನ) ನೀಡುವುದೂ ವಾಗ್ದಾ
ಾಡಿದರೆ ಪೂರೈಸುವುದೂ ಕಷ್ಟ ಕಾರ್ಪಣ್ಯಗಳಲ್ಲಿಯೂ ಸತ್ಯಾಸತ್ಯಗಳ ಸಮರವಾಗುತ್ತಿ
ಾಗಲೂ ಸಹನೆಯಿಂದಿರುವುದೂ ಧರ್ಮಶೀಲತೆಯಾಗಿರುತ್ತದೆ. ಇವರೇ ಸತ್ಯಸಂಧರು
ುತ್ತು ಇವರೇ ಧರ್ಮನಿಷ್ಠರು." (ಪವಿತ್ರ ಕುರ್‌ಆನ್, 2:177)

ಈ ವಚನದಲ್ಲಿ ಗ್ರಂಥದವರ ಕಪಟ ದೇವಭಕ್ತಿಯನ್ನು ವಿಮರ್ಶಿಸುತ್ತಾ ನೈಜ ದೇವ
ಭಕ್ತಿಯನ್ನು ಸ್ಪಷ್ಟಪಡಿಸಲಾಗಿದೆ. ಮೂಲದಲ್ಲಿ ಉಪಯೋಗಿಸಲಾದ 'ಬಿರ್ರ್' ಎಂಬ ಪದವು
ವಿಶೇಷತಃ ಗಮನಾರ್ಹವಾಗಿದೆ. ಅದಕ್ಕೆ ಪುಣ್ಯದ ಹೊರತಾಗಿ 'ಹಕ್ಕುಗಳನ್ನು ಈಡೇರಿಸುವುದು'
ಎಂಬ ಅರ್ಥವೂ ಇದೆ. ಅದರಲ್ಲಿ ದೇವನ ಮತ್ತು ಸೃಷ್ಟಿಗಳ ಹಕ್ಕುಗಳೂ ಸೇರಿವೆ.
ನಮಾಝ್ ಮತ್ತು ಝಕಾತನ್ನು ಇದೇ ವಾಸ್ತವಿಕತೆಯನ್ನು ಮನದಟ್ಟು ಮಾಡುವುದಕ್ಕಾಗಿ
ಪ್ರಸ್ತಾಪಿಸಲಾಗಿದೆ. ಅಲ್ಲಾಹನ ಮಾತ್ರವಲ್ಲ ಜನರ ಹಕ್ಕುಗಳೂ ಈಡೇರಬೇಕು. ಮನದಲ್ಲಿ
ವಿಶ್ವಾಸದ ಬೆಳಕು ಬೆಳಗುತ್ತಾ ಸ್ವತಃ ಪರಿಶ್ರಮದಿಂದ ಸಂಪಾದಿಸಿದ ಹಣವನ್ನು ಬಂಧುಗಳು,
ಅನಾಥರು, ಯಾತ್ರಿಕರು, ಸಹಾಯಾರ್ಥಿಗಳು, ಗುಲಾಮರು ಇತ್ಯಾದಿ ಸಮಾಜದ ದುರ್ಬಲ
ವಿಭಾಗಗಳಿಗೆ ವ್ಯಯಿಸಿದಾಗ ಮಾತ್ರ ಮಾನವನು ಪುಣ್ಯದ ಉನ್ನತಿಗೇರುತ್ತಾನೆ. ಇದು ಈ
ವಚನದ ಸಾರಾಂಶವಾಗಿದೆ. ಇದರಲ್ಲಿ ಪ್ರೀತಿ, ಸಹಾನುಭೂತಿ ಮತ್ತು ಔದಾರ್ಯದ
ಕಲ್ಪನೆಯೂ ಇದೆ. ಈ ರೀತಿ ಈ ಒಳಿತು ಸಕಲ ಸತ್ಕಾರ್ಯಗಳಿಗೂ ಅನ್ವಯಿಸುತ್ತದೆ.
ಈ ನಿಟ್ಟಿನಲ್ಲಿ ಈ ಒಳಿತು ಅಲ್ಲಾಹನ ಒಂದು ಗುಣವಿಶೇಷವೂ ಆಗಿದೆ. ನಮಾಝ್
ಎಂದಾಗಿ ಅಲ್ಲಾಹನೊಂದಿಗೆ ಸಂಬಂಧ ಸ್ಥಾಪನೆಯಾಗುವುದು. ಹಾಗೆಯೇ ಝಕಾತ್
ಮಾನವರ ಸೇವೆ ಸಲ್ಲಿಸುವ ನಿರ್ದಿಷ್ಟ ರೂಪವಾಗಿದೆ. ಮಾನವನ ಸಂಪತ್ತು ಕೇವಲ
ಅವನಿಗೇ ಸೀಮಿತವಲ್ಲ. ಸಮಾಜದ ಬಡವರಿಗೂ ದರಿದ್ರರಿಗೂ ಅದರಲ್ಲಿ ಹಕ್ಕಿದೆಯೆಂದು
ಇತರ ಕೆಲವು ವಚನಗಳು ಸ್ಪಷ್ಟಪಡಿಸುತ್ತವೆ. "ಸಂಬಂಧಿಕರು, ದರಿದ್ರರು ಮತ್ತು

ಪ್ರಯಾಣಿಕರಿಗೂ ಅವರ ಹಕ್ಕುಗಳನ್ನು ಕೊಡಿರಿ. ದುಂದುವೆಚ್ಚ ಮಾಡಬೇಡಿರಿ. ದುಂದುಗಾರ
ಶೈತಾನನ ಸಹೋದರರಾಗಿದ್ದಾರೆ. ಶೈತಾನನಾದರೋ ತನ್ನ ಪ್ರಭುವಿಗೆ ಕೃತಘ್ನನು."

(ಬನೀ ಇಸ್ರಾಈಲ್: 25-2

ಇಲ್ಲಿ ಮಾನವರ ಸಂಪತ್ತಿನಲ್ಲಿ ಇತರರ ಹಕ್ಕನ್ನು ಸ್ಥಾಪಿಸಿದ ಬಳಿಕ ದುಂದುಗಾ
ಮತ್ತು ದುರ್ವ್ಯಯವನ್ನು ತಡೆಯಲಾಗಿದೆ. ಯಾಕೆಂದರೆ ದುಂದು ಮತ್ತು ದುರ್ವ್ಯ
ಮಾಡುವವರಿಗೆ ಇತರರ ಹಕ್ಕುಗಳನ್ನು ಗುರುತಿಸಲು ಅಥವಾ ಒಪ್ಪಲು ಸಾಧ್ಯವಾಗದ
ಇದೇ ಆಶಯವನ್ನು ಹೊಂದಿರುವ ಇನ್ನೊಂದು ವಚನ ಹೀಗಿದೆ, "ಅಲ್ಲಾಹನೇ ತಾನಿಚ್ಛ
ದವರಿಗೆ ಜೀವನಾಧಾರ ವಿಸ್ತೃತಗೊಳಿಸುವುದು ಮತ್ತು (ತಾನಿಚ್ಛಿಸಿದವರಿಗೆ) ಸಂಕು
ಗೊಳಿಸುವುದನ್ನು ಇವರು ನೋಡುವುದಿಲ್ಲವೇ? ಇದರಲ್ಲಿ ಸತ್ಯವಿಶ್ವಾಸಿಗಳಿಗೆ ಅನೆ
ದೃಷ್ಟಾಂತಗಳಿವೆ. ಆದುದರಿಂದ ಸಂಬಂಧಿಕನಿಗೆ, ದರಿದ್ರನಿಗೆ ಮತ್ತು ಪ್ರಯಾಣಿಕ
ಅವರವರ ಹಕ್ಕುಗಳನ್ನು ಕೊಡು. ಅಲ್ಲಾಹನ ಸಂಪ್ರೀತಿಯನ್ನು ಬಯಸುವವರಿಗೆ ಈ ಕ್ರ
ಉತ್ತಮವಾಗಿದೆ. ಅವರೇ ಯಶಸ್ವಿಗಳಾಗುವರು."

(ಪವಿತ್ರ ಕುರ್‌ಆನ್, 30:37-3

ಈ ಎರಡು ಅಧ್ಯಾಯಗಳು ಮಕ್ಕಾದಲ್ಲಿ ಅವತೀರ್ಣಗೊಂಡಿವೆ. ಮಕ್ಕಾದ
ಝಕಾತ್ ಕಡ್ಡಾಯಗೊಳಿಸಿರಲಿಲ್ಲ. ಆದರೆ ಈ ವಚನಗಳಲ್ಲಿ ಕುಟುಂಬಿಕರ, ದರಿದ್ರ
ಮತ್ತು ಪ್ರಯಾಣಿಕರ ಹಕ್ಕುಗಳನ್ನು ವಿವರಿಸಲಾಗಿದೆ. ಇಮಾಮ್ ರಾಝಿಯವರು
ವಚನದ ವಿವರಣೆಯಲ್ಲಿ ಹೀಗೆ ಹೇಳಿದ್ದಾರೆ: ಇಲ್ಲಿ ಪ್ರಸ್ತಾಪಿಸಲಾಗಿರುವ ಎಲ್ಲ
ಸೇವೆಯೂ ಕಡ್ಡಾಯವಾಗಿದೆ. ಝಕಾತ್ ಕಡ್ಡಾಯವಾಗಲು ವರ್ಷ ಪೂರ್ತಿಯಾಗಬೇಕೆಂ
ಶರತ್ತಿದೆ. ಇಲ್ಲಿ ಅಂಥ ಯಾವುದೇ ನಿಯಮವಿಲ್ಲ. ಅರ್ಥಾತ್ ಎಲ್ಲ ಸ್ಥಿತಿಯಲ್ಲಿಯ
ಹಕ್ಕುದಾರರಿಗೆ ಅವರ ಹಕ್ಕುಗಳನ್ನು ನೀಡಬೇಕು. ಏಕೆಂದರೆ ಇಲ್ಲಿ ಝಕಾತ್‌ನ ಬ
ಹೇಳಲಿಲ್ಲ. ಇಲ್ಲಿ ಸೃಷ್ಟಿಗಳೊಡನೆ ಸಾಮಾನ್ಯವಾಗಿ ಪಾಲಿಸಬೇಕಾದ ಸಹಾನುಭೂತಿ
ಕುರಿತು ಹೇಳಲಾಗಿದೆ. ಅರ್ಥಾತ್, ಈ ವಚನದಲ್ಲಿ ಸೂಚಿಸಲಾಗಿರುವ ವಿಭಾಗಕ್ಕೆ ತ
ಕೈಯಲ್ಲಿ ಅಗತ್ಯಕ್ಕಿಂತ ಅಧಿಕ ಸಂಪತ್ತಿದ್ದರೂ ಇಲ್ಲದಿದ್ದರೂ ಸಹಾಯ ಮತ್ತು ಉಪಕಾ
ಮಾಡಲೇಬೇಕು. (ತಫ್ಸೀರ್ ಕಬೀರ

ಸಮಾಜದ ದುರ್ಬಲ ವರ್ಗಕ್ಕೆ ನೀಡುವ ಸೇವೆ ಮತ್ತು ಸಹಾಯವು ಅವರ
ತೋರಿಸುವ ಔದಾರ್ಯವಲ್ಲ. ಬದಲಾಗಿ, ಅದು ಅವರ ಹಕ್ಕುಗಳೆಂಬ ಕಲ್ಪನೆಯನ
ಇಲ್ಲಿ ಎತ್ತಿ ಹಿಡಿಯಲಾಗಿದೆ. ಈ ಕಲ್ಪನೆ ಸಮಾಜದಲ್ಲಿ ಶ್ರೀಮಂತರು ಬಡವರನ
ಶೋಷಿಸುವುದನ್ನು ತಡೆಯುತ್ತದೆ. ತನ್ನ ಸ್ವಾಧೀನವಿರುವ ಸಂಪತ್ತಿನಲ್ಲಿ ಇತರರ ಹಕ್ಕಿ
ಅವರ ಹಕ್ಕುಗಳನ್ನು ನೀಡಬೇಕಾದುದು ನಮ್ಮ ಕರ್ತವ್ಯ. ಈ ಪ್ರಜ್ಞೆಯು ಶ್ರೀಮಂತರ
ಮೂಡಿದರೆ, ಬಡವರ ಮತ್ತು ಶ್ರೀಮಂತರ ನಡುವೆ ಇಂದಿನಂತೆ ಘರ್ಷಣೆ ಎಂದ
ಇರಲಾರದು.

ಲ

ಕೆಲವೊಮ್ಮೆ ಕೆಲವರಿಗೆ ತಮ್ಮ ಆರ್ಥಿಕ ಸುಧಾರಣೆ ಅಥವಾ ತುರ್ತು ಅಗತ್ಯಗಳಿಗೆ
ುದ ಆವಶ್ಯಕತೆಯಿರುತ್ತದೆ. ಆಗ ಆರ್ಥಿಕ ನೆರವು ಸಂದರ್ಭೋಚಿತವಾಗಿ ದೊರೆಯ
ರೆ ಆತನ ಪರಿಸ್ಥಿತಿ ಮತ್ತಷ್ಟು ಹದಗೆಡುವುದು. ಅಂಥ ಸಂದರ್ಭಗಳಲ್ಲಿ ಯಾರಾದರೂ
ುದ ನೆರವು ನೀಡಿದರೆ ಅದು ಅವರ ಮಟ್ಟಿಗೆ ಬಹುದೊಡ್ಡ ಉಪಕಾರವಾಗುವುದರಲ್ಲಿ
ಶಯವಿಲ್ಲ. ಇಲ್ಲಿ ಸಾಲ ನೀಡಿದಾತನಿಗೆ ಆತನ ಹಣ ಮರಳಿ ದೊರೆಯುತ್ತದೆ. ವಸ್ತುತಃ
ಸಾಲವು ಬಹುದೊಡ್ಡ ಸೇವೆಯಾಗುವುದು. ಅದರ ಪುಣ್ಯ ಮತ್ತು ಪ್ರತಿಫಲಗಳನ್ನು
ಾದಿಯವರು(ಸ) ವಿವಿಧ ಸಂದರ್ಭಗಳಲ್ಲಿ ಪ್ರಸ್ತಾಪಿಸಿದ್ದಾರೆ. ಅಬ್ದುಲ್ಲಾ ಬಿನ್
ಾವೂದ್(ರ) ವರದಿ ಮಾಡಿದ್ದಾರೆ. 'ಓರ್ವ ಮುಸ್ಲಿಮನು ಇನ್ನೋರ್ವ ಮುಸ್ಲಿಮನಿಗೆ
ು ನೀಡಿದರೆ ಅದು ಒಂದು ಬಾರಿ ನೆರವಾದಂತಾಗುವುದು.' (ಇಬ್ನುಮಾಜಃ)

ಇಮಾಮ್ ಶೌಕಾನಿ ಹೇಳುತ್ತಾರೆ: ಸಾಲ ನೀಡುವ ಪುಣ್ಯದ ಕುರಿತು ಹಲವು ಪ್ರವಾದಿ
ನಗಳಲ್ಲಿ ತಿಳಿಸಲಾಗಿದೆ. ಅದಲ್ಲದೆ ಬೇಡಿಕೆಗಳನ್ನು ಈಡೇರಿಸಬೇಕು, ಅವರಿಗೆ
ವಾಗಬೇಕು, ಅವರ ಬಡತನ ಮತ್ತು ಹಸಿವೆಯನ್ನು ಹೋಗಲಾಡಿಸಬೇಕು. ಇದರಲ್ಲಿ
ುವೂ ಸೇರಿದೆ. ಸಾಲವು ಧರ್ಮಸಮ್ಮತವೆಂಬ ಕುರಿತು ಯಾರಿಗೂ ಭಿನ್ನಾಭಿಪ್ರಾಯವಿಲ್ಲ.

ಅತ್ಯಾವಶ್ಯಕ ಸಂದರ್ಭಗಳಲ್ಲಿ ಸಾಲ ಕೇಳುವುದಕ್ಕೆ ಯಾವುದೇ ಅಡ್ಡಿಯಿಲ್ಲ.
ರಿಂದ ಯಾರ ಘನತೆ, ಗೌರವಗಳಿಗೂ ಕುಂದುಂಟಾಗುವುದಿಲ್ಲ. ಇಬ್ನು ರಸಲಾನ್
ಳಿರುವಂತೆ, ಸಾಲ ಕೇಳುವುದು, ಅವ ಮರ್ಯಾದೆಯಾಗಿರುತ್ತಿದ್ದರೆ ಪ್ರವಾದಿಯವರು
ದೂ ಸಾಲ ಪಡೆಯುತ್ತಿರಲಿಲ್ಲ. (ನೈಲುಲ್ ಔತಾರ್, 5/347)

ವಾಣಿಜ್ಯ ರಂಗದಲ್ಲಿ ಸಾಲ ಹೆಚ್ಚು ಪ್ರಮುಖವಾಗಿದೆ. ವ್ಯಾಪಾರ ಆರಂಭಿಸಿ ಅದನ್ನು
ತ್ತಮಪಡಿಸಲು ಮತ್ತು ಆಗಾಗ ಸಂಭವಿಸುವ ನಷ್ಟ ಪರಿಹರಿಸಲು ಸಾಲವಿಲ್ಲದೆ
ಸ್ಯವಿಲ್ಲ. ಈ ಕಾಲದಲ್ಲಿ ಸಾಲವು ವ್ಯಾಪಾರದ ಒಂದು ಭಾಗವೇ ಆಗಿದೆ. ಸಾಲದ
ವಾದೇವಿ ನಿಂತರೆ ದೊಡ್ಡದೊಡ್ಡ ವ್ಯಾಪಾರ ಸಂಸ್ಥೆಗಳನ್ನು ಕೂಡಾ ಮುಚ್ಚಬೇಕಾಗ
ಬಹುದು. ಆದರೆ ಇಂದಿನ ಲೌಕಿಕ ಮನಸ್ಸು ಸಾಲವನ್ನು ಸುಲಿಗೆ ಲಾಭದ ಸರಳ
ದಿಯೆಂದು ಭಾವಿಸಿದೆ. ಆದ್ದರಿಂದಲೇ ಇಂದು ಬಡ್ಡಿ ಪಡೆಯದೆ ಸಾಲ ನೀಡಲು
ಾರೂ ಸಿದ್ಧರಿಲ್ಲ. ಅದೂ ಬಡ್ಡಿ ಹೆಚ್ಚಿನ ದರದಲ್ಲಿ ದೊರೆಯಬೇಕೆಂದು ಬಯಸುತ್ತಾರೆ.
ಲ ಪಡೆದಾತನ ಸಂಪಾದನೆಯಿಂದ ಒಂದಂಶ ಲಾಭವು ಸಾಲ ನೀಡಿದವರಿಗೂ
ರೆಯಬೇಕಾದುದು ನ್ಯಾಯಯುತವೆಂದು ಬಡ್ಡಿಯ ವಕ್ತಾರರು ವಾದಿಸುತ್ತಾರೆ. ಹಣದ
ು ಕುಸಿತವೆಂಬ ಮತ್ತೊಂದು ಸಮರ್ಥನೆಯಿದೆ.

ಲಾಭ ಸಂಪಾದನೆಯ ಅಡ್ಡ ಹಾದಿಯೆಂದು ಸಾಲವನ್ನು ಪರಿಗಣಿಸುವ ಲೌಕಿಕ
ನಸ್ಸನ್ನು ಇಸ್ಲಾಮ್ ವಿರೋಧಿಸುತ್ತದೆ. ಅದು ಸಾಲವನ್ನು ಅಗತ್ಯವಿರುವವರಿಗೆ ಕೊಡುವ
ುದು ರೀತಿಯ ಔದಾರ್ಯವೆಂದು ಪರಿಗಣಿಸುತ್ತದೆ. ಆದ್ದರಿಂದ ಹಣದ ದರ ಕುಸಿತದ

ಪ್ರಕಾರ ಬಡ್ಡಿ ನಿಗದಿಪಡಿಸುವ ಬದಲು ಸಾಲಗಾರನಿಗೆ ಗರಿಷ್ಠ ಸಾಲ ನೀಡಬೇಕೆಂಬ
ಇಸ್ಲಾಮಿನ ಬೇಡಿಕೆಯಾಗಿದೆ. ಸಾಲವನ್ನು ಪಾವತಿಸಲು ಸಾಲ ಪಡೆದಾತನು ಕಾಲಾವ
ಕೇಳಿದರೆ ಅನುಮತಿಸಬೇಕು. ಸಾಲವನ್ನು ಮರಳಿಸಲಾರದ ಆರ್ಥಿಕ ಸಂಕಷ್ಟಕ್ಕೆ ಸಿಲುಕಿ
ಸಾಲ ಮನ್ನಾ ಮಾಡಬೇಕು. ಬಡ್ಡಿ ನಿಷಿದ್ಧಗೊಳಿಸುವ ಘೋಷಣೆಯ ಜತೆಗೆ ಸಾ
ಸಂಬಂಧಿಸಿದ ನೈತಿಕ ನಿರ್ದೇಶಗಳನ್ನು ಕುರ್‌ಆನ್ ಹೇಳುತ್ತದೆ. "ಓ ಸತ್ಯವಿಶ್ವಾಸಿ
ಅಲ್ಲಾಹನನ್ನು ಭಯಪಡಿರಿ. ನೀವು ನಿಜಕ್ಕೂ ವಿಶ್ವಾಸಿಗಳಾಗಿರುವಿರಾದರೆ, ಜನರಿಂದ ನಿ
ಬರತಕ್ಕ ಬಡ್ಡಿಯನ್ನು ಬಿಟ್ಟುಬಿಡಿರಿ. ನೀವು ಹಾಗೆ ಮಾಡದಿದ್ದರೆ ಅಲ್ಲಾಹ್ ವ
ಅವನ ಸಂದೇಶವಾಹಕರ ಕಡೆಯಿಂದ ನಿಮ್ಮ ವಿರುದ್ಧ ಯುದ್ಧ ಘೋಷಣೆಯಿದೆಯೆ
ನಿಮಗೆ ತಿಳಿದಿರಲಿ. ಇನ್ನಾದರೂ ಪಶ್ಚಾತ್ತಾಪಪಟ್ಟರೆ (ಮತ್ತು ಬಡ್ಡಿಯನ್ನು ವರ್ಜಿಸಿ
ಅಸಲು ಹಣ ಪಡೆಯಲು ನೀವು ಹಕ್ಕುದಾರರಾಗಿರುತ್ತೀರಿ. ನೀವು ಅಕ್ರಮವೆಸಗ
ಬಾರದು. ನಿಮ್ಮ ಮೇಲೆ ಅಕ್ರಮವಾಗಲೂಬಾರದು. ನಿಮ್ಮ ಸಾಲಗಾರನು 'ಕಾಸಿಲ್ಲ
ನಾದರೆ' ಅವನಿಗೆ ಸುಸ್ಥಿತಿಯುಂಟಾಗುವ ತನಕ ಸಮಯಾವಕಾಶ ಕೊಡಿರಿ ಮತ್ತು
ದಾನರೂಪದಲ್ಲಿ ಸಾಲವನ್ನೇ ಬಿಟ್ಟುಕೊಟ್ಟರೆ ಅದು ನಿಮ್ಮ ಮಟ್ಟಿಗೆ ಇನ್ನಷ್ಟು ಉತ್ತ
ವಾಗಿರುವುದು, ನೀವು ಅರಿತವರೇ ಆಗಿದ್ದರೆ. ನೀವು ಅಲ್ಲಾಹನ ಕಡೆಗೆ ಮರಳಿಸಲ್ಪ
ದಿನದ ಅವಮಾನ ಹಾಗೂ ಕಷ್ಟಗಳಿಂದ ಭಯಪಡಿರಿ. ಅಲ್ಲಿ ಪ್ರತಿಯೊಬ್ಬನಿಗೂ ಅ
ಗಳಿಸಿದ ಪುಣ್ಯ ಅಥವಾ ಪಾಪಗಳ ಸರ್ವ ಸಂಪೂರ್ಣ ಪ್ರತಿಫಲ ಸಿಗುವುದು ವ
ಯಾರ ಮೇಲೂ ಎಷ್ಟು ಮಾತ್ರಕ್ಕೂ ಅನ್ಯಾಯವಾಗಲಾರದು."

(ಪವಿತ್ರ ಕುರ್‌ಆನ್, 2:278-2

ಪ್ರವಾದಿ ವಚನಗಳಲ್ಲಿ ಸಾಲಗಾರನಿಗೆ ಸೂಕ್ತ ರೀತಿಯಲ್ಲಿ ಸಾಲ ಮರಳಿಸು
ನೆನಪಿಸುವ ಜತೆಗೆ, ಸಾಲಗಾರನೊಡನೆ ಸೌಮ್ಯವಾಗಿ ವರ್ತಿಸಬೇಕೆಂದು ಸಾಲ
ದಾತನಿಗೂ ಉಪದೇಶವಿದೆ. ಅಬೂಹುರೈರಾರಿಂದ(ರ) ವರದಿ: "ಪ್ರವಾದಿಯವರ
ಓರ್ವನಿಂದ ಒಂದು ಒಂಟೆ ಸಾಲ ಪಡೆದಿದ್ದರು. ಆತನು ಬಹಳ ಒರಟಾಗಿ ಸಾಲ
ಮರಳಿಸುವಂತೆ ಹೇಳಿದನು. ಇದರಿಂದ ಕುಪಿತರಾದ ಸಹಾಬಿಗಳು ಆತನಿಗೆ ಕಟು
ಉತ್ತರಿಸ ಬಯಸಿದ್ದರು. ಆಗ ಪ್ರವಾದಿಯವರು(ಸ) ಅವರನ್ನು ತಡೆದು ಹೀಗೆಂದರು:
ಹಕ್ಕನ್ನು ಕೇಳಲು ಆತನಿಗೆ ಹಕ್ಕಿದೆ. ಆದ್ದರಿಂದ ಆತನಿಗೆ ಹಕ್ಕುಗಳನ್ನು ಕೇಳಲು ಅನು
ನೀಡಿರಿ. ಒಂದು ಒಂಟೆಯನ್ನು ಖರೀದಿಸಿ ಆತನಿಗೆ ನೀಡಿರಿ. ಆತನು ನೀಡಿದ ಒಂಟೆ
ಉತ್ತಮವಾದುದು ಮಾತ್ರ ಲಭ್ಯವಿದೆಯೆಂದು ಸಹಾಬಿಗಳು ತಿಳಿಸಿದಾಗ ಸಾಲ
ಅತ್ಯುತ್ತಮವಾಗಿ ಮರುಪಾವತಿಸುವಾತನೇ ನಿಮ್ಮ ಪೈಕಿ ಅತ್ಯುತ್ತಮನು ಎಂದು ಕ
ಪ್ರವಾದಿಯವರು ಅದನ್ನೇ ತರಲು ಆದೇಶಿಸಿದರು." (ಬುಖಾರಿ, ಮುಸ್ಲಿ

ಸಾಲಗಾರನೊಡನೆ ಸೌಮ್ಯವಾಗಿ ವರ್ತಿಸುವ ಪುಣ್ಯದ ಕುರಿತು ಇನ್ನೊ
ಹದೀಸ್‌ನಲ್ಲಿ ಹೀಗಿದೆ: 'ಯಾರಾದರೂ ಸಂಕಷ್ಟದಲ್ಲಿರುವವರಿಗೆ ಸಾಲ ಪಾವತಿಗೆ ಕಾಲಾವ
ನೀಡಿದರೆ ಅಥವಾ ಸಾಲದಲ್ಲಿ ರಿಯಾಯಿತಿ ತೋರಿಸಿದರೆ ಅಲ್ಲಾಹನು ತನ್ನ ನೆರ

ರಿಗೆ ಆಶ್ರಯ ನೀಡುವನು.' (ಮುಸ್ಲಿಮ್) ಅಬೂಹುರೈರಾರ ಇನ್ನೊಂದು ವರದಿಯಲ್ಲಿ
ಇದೆ: ಓರ್ವನು ಕಷ್ಟ ಅನುಭವಿಸುವಾತನಿಗೆ ಕಾಲಾವಕಾಶ ನೀಡಿದರೆ, ಅಥವಾ
ವನ್ನು ಮನ್ನಾ ಮಾಡಿದರೆ, ತನ್ನ ನೆರಳಿನ ಹೊರತು ಬೇರೆ ಯಾವ ನೆರಳೂ ಲಭ್ಯವಿಲ್ಲ
ದು ಅಲ್ಲಾಹನು ಆತನಿಗೆ ತನ್ನ ಆಸನದ ನೆರಳಲ್ಲಿ ಆಶ್ರಯ ನೀಡುವನು. (ತಿರ್ಮಿದಿ)
ನ್ನೊಂದು ಪ್ರವಾದಿ ವಚನದಲ್ಲಿ ಹೀಗಿದೆ:

'ಓರ್ವನಿಗೆ ಅಲ್ಲಾಹನು ಸಂಪತ್ತನ್ನು ನೀಡಿದ್ದು ಅವನು ಅದನ್ನು ಜನರಿಗೆ ಸಾಲ
ಟ್ಟಿದ್ದನು. ಕಷ್ಟದಲ್ಲಿರುವವರಿಗೆ ಸಾಲ ಮರುಪಾವತಿಗೆ ಕಾಲಾವಕಾಶವನ್ನು ನೀಡಿದ್ದನು.
ತ್ತಮ ಸ್ಥಿತಿಯಲ್ಲಿರುವವರು ಸಾಲ ಮರುಪಾವತಿಯಲ್ಲಿ ಏನಾದರೂ ಲೋಪ ತೋರಿದರೆ
ನ್ನು ನಿರ್ಲಕ್ಷಿಸುವಂತೆ ತನ್ನ ನೌಕರರಿಗೆ ಆದೇಶ ನೀಡುತ್ತಿದ್ದನು. ಈ ಸದ್
ವಹಾರಕ್ಕಾಗಿ ಅಲ್ಲಾಹನು ಅವನಿಗೆ ಸ್ವರ್ಗದಲ್ಲಿ ಸ್ಥಳಾವಕಾಶ ನೀಡಿದನು.

(ಬುಖಾರಿ, ಮುಸ್ಲಿಮ್)

'ಒಮ್ಮೆ ಓರ್ವ ಸಾಲಗಾರನು ಸ್ವಲ್ಪ ರಿಯಾಯಿತಿ ತೋರಿಸುವಂತೆ ಸಾಲ ನೀಡಿ
ನಲ್ಲಿ ವಿನಂತಿಸಿದನು. ಯಾವ ರಿಯಾಯಿತಿಯನ್ನೂ ನೀಡುವುದಿಲ್ಲವೆಂದು ಆತ
ೆ ಹಾಕಿ ಹೇಳಿದನು. ಇದನ್ನು ಕೇಳಿದ ಪ್ರವಾದಿಯವರು(ಸ) ಕೋಣೆಯಿಂದ ಹೊರ
ದು ಸತ್ಕರ್ಮ ಮಾಡುವುದಿಲ್ಲವೆಂದು ಆಣೆಹಾಕಿದವರು ಯಾರು? ಎಂದು
ಚಾರಿಸಿದರು. ಆಗ ಆ ಸಾಲ ನೀಡಿದವನು ತನ್ನ ತಪ್ಪನ್ನು ಒಪ್ಪಿಕೊಂಡು, ಆತ
ರುಸುವಂತೆ ವರ್ತಿಸುವುದಾಗಿ ತಿಳಿಸಿದನು.

(ಬುಖಾರಿ, ಮುಸ್ಲಿಮ್)

ಕಅಬ್ ಬಿನ್ ಮಾಲಿಕ್‌ರಿಂದ ಏನೋ ಸಾಲ ಪಡೆದ ಅಬೀ ಹದ್ರದ್‌ರಿಗೆ,
ರಳಿಸಲು ತಿಳಿಸಿದಾಗ ಅನಿವಾರ್ಯ ಪರಿಸ್ಥಿತಿಯಿಂದಾಗಿ ಅವರಿಗೆ ಮರುಪಾವತಿಸ
ಗಲಿಲ್ಲ. ಆ ಕುರಿತು ಕಅಬ್‌ರೊಂದಿಗೆ ಮಾತಾಡಿದಾಗ ಸಾಲದಲ್ಲಿ ಅರ್ಧಾಂಶವನ್ನು
ನ್ನಾ ಮಾಡಿ ಬಾಕಿ ಪಡೆದುಕೊಳ್ಳುವಂತೆ ಪ್ರವಾದಿಯವರು(ಸ) ಸನ್ನೆಯಿಂದ
ಚಿಸಿದರು. ಹಾಗೆಯೇ ಕಅಬ್‌ರು ಆ ಆದೇಶವನ್ನು ಪಾಲಿಸಿದರು.

(ಬುಖಾರಿ, ಮುಸ್ಲಿಮ್)

ಸಾಲ ಪಡೆದ ವಸ್ತು ಕಳೆದು ಹೋದರೆ ಅಥವಾ ಮರುಪಾವತಿ ಅಸಾಧ್ಯವಾದರೆ
ವರ ನಿಯಮವೇನೆಂಬುದು ಇಲ್ಲಿ ಚರ್ಚಾ ವಿಷಯವಲ್ಲ. ಅಪೇಕ್ಷಿತರಿಗೆ ನೀಡ
ಗುವ ಸಾಲವು ಒಂದು ಸೇವೆಯಾಗಿದೆ. ಅದನ್ನು ಲಾಭ ಪಡೆಯುವ ಸುಲಭ
ದಿಯೆಂದು ಭಾವಿಸುವುದು ಇಸ್ಲಾಮೀ ಶಿಕ್ಷಣಗಳಿಗೆ ವಿರುದ್ಧವಾಗಿದೆಯೆಂಬುದನ್ನು
ತ್ರ ಇಲ್ಲಿ ಉದ್ದೇಶಿಸಲಾಗಿದೆ. ಸಾಲಗಾರನೊಡನೆ ಪ್ರೀತಿ, ಸಹಾನುಭೂತಿ ಮತ್ತು
ಮ್ಯತೆಯ ಧೋರಣೆಯನ್ನು ಕೈಗೊಳ್ಳಬೇಕು. ಅವರ ದೌರ್ಬಲ್ಯವನ್ನು ಶೋಷಿಸ
ರದು. ಅನಿವಾರ್ಯ ಪರಿಸ್ಥಿತಿಯಲ್ಲಿ ಅವರಿಗೆ ಆದಷ್ಟು ರಿಯಾಯಿತಿ ನೀಡಬೇಕು.
ವೆಲ್ಲ ಸೇವೆ ಮತ್ತು ಸದ್ವರ್ತನೆಯ ವ್ಯಾಖ್ಯಾನದಲ್ಲಿ ಸೇರಿದೆ.

## ಉಡುಗೊರೆ

ಉಡುಗೊರೆಯೂ ಸೇವೆ ಮತ್ತು ಸದ್ವರ್ತನೆಯ ಒಂದು ರೂಪವಾಗಿದೆ. ಉಡುಗ
ಅಥವಾ ಪಾರಿತೋಷಕವು ಪ್ರತ್ಯುಪಕಾರವನ್ನು ಅಪೇಕ್ಷಿಸದೆ ನೀಡಲಾಗುವ ದಾನವಾ
ಅದರಿಂದ ಕೇವಲ ಅಲ್ಲಾಹನ ಸಂಪ್ರೀತಿಯನ್ನು ಮಾತ್ರ ನಿರೀಕ್ಷಿಸಬೇಕು. ಒ
ಉಡುಗೊರೆ ನೀಡಿದ ವಸ್ತುವನ್ನು ಆ ಬಳಿಕ ಬೆಲೆ ನೀಡಿ ಕೂಡ ಮರಳಿ ಪಡೆಯ
ದೆಂದು ಹದೀಸ್‌ಗಳಲ್ಲಿ ಬಂದಿವೆ.

ಉಮರ್ ಹೇಳಿದರು, "ಯುದ್ಧಕ್ಕಾಗಿ ನಾನೋರ್ವನಿಗೆ ಒಂದು ಉತ್ತಮ ಕು
ಯನ್ನು ನೀಡಿದೆ. ಆದರೆ ಆರ್ಥಿಕವಾಗಿ ಭಾರೀ ದುರ್ಬಲನಾಗಿದ್ದುದರಿಂದ ಆ
ಕುದುರೆಯನ್ನು ಸರಿಯಾಗಿ ಪೋಷಿಸಲಾಗಲಿಲ್ಲ. ಇದರಿಂದಾಗಿ ಕುದುರೆಯು ಸಾಯ
ಸಾಧ್ಯತೆಯಿದೆಯೆಂದು ಮನಗಂಡಾಗ ಅದನ್ನು ಅವರಿಂದ ಮರಳಿ ಖರೀದಿಸುವ
ಉತ್ತಮವೆಂದು ಭಾವಿಸಿ ನಾನು ಆ ಕುರಿತು ಪ್ರವಾದಿಯವರೊಡನೆ ಕೇಳಿದೆ. ಆಗ ಅ
ಹೀಗೆ ಉತ್ತರಿಸಿದರು. ನೀನು ಒಂದು ದಿರ್ಹಮ್ ನೀಡಿಯಾದರೂ ಅದನ್ನು ಖರೀ
ಬಾರದು. ಏಕೆಂದರೆ ದಾನವನ್ನು ಮರಳಿ ಪಡೆಯುವುದು ನಾಯಿಯು ತಾನು ವಾ
ಮಾಡಿದ ಬಳಿಕ ಪುನಃ ಅದನ್ನು ನೆಕ್ಕುವುದಕ್ಕೆ ಸಮಾನವಾಗಿದೆ." (ಬುಖಾರಿ, ಮುಸ್ಲಿ

ದಾನವಾಗಿ ನೀಡಿದ ವಸ್ತುವನ್ನು ಮರಳಿ ಪಡೆಯುವುದೆಂದರೆ ಒಂದೊಮ್ಮೆ ತನ್ನಲ್ಲಿ
ಸಮೃದ್ಧ ಪ್ರೀತಿ, ಸಹಾನುಭೂತಿ ಮತ್ತು ಪವಿತ್ರ ಭಾವನೆಯನ್ನು ಸಂಪತ್ತಿನ ಅತಿ ಮೋ
ದಿಂದ ಹಾಳುಗೆಡಹಿದಂತೆ. ಪ್ರೀತಿ, ಸಹಾನುಭೂತಿಯನ್ನು ಕಿಂಚಿತ್ತೂ ತೋರಿಸದಿರುವ
ಕೂಡಾ ಒಮ್ಮೆ ನೀಡಿದ ದಾನವನ್ನು ಮರಳಿ ಪಡೆಯುವಷ್ಟು ಗಂಭೀರವಲ್ಲ. ದಾನ ಅಥ
ಉಡುಗೊರೆ ನೀಡಿದ ವಸ್ತುವನ್ನು ಬೆಲೆ ನೀಡಿ ಖರೀದಿಸುವಾಗ ಅದರಲ್ಲಿ ಪ್ರತ್ಯುಪಕಾ
ಅಂಶವು ಸೇರುವ ಸಾಧ್ಯತೆಯಿರುವ ಕಾರಣದಿಂದಲೇ ಪ್ರವಾದಿಯವರು ಅದ
ನಿಷೇಧಿಸಿದ್ದಾರೆ. ಏಕೆಂದರೆ ದಾನವು ದೊರೆತ ವ್ಯಕ್ತಿಯು ಅದನ್ನು ನೀಡಿದಾತ
ಮರಳಿಸುವಾಗ ಸಹಜವಾಗಿ ಬೆಲೆ ಅಥವಾ ಇನ್ನಿತರ ವಿಷಯಗಳಲ್ಲಿ ಔದಾರ್ಯ ತೋರಿ
ತಿಳಿದೋ ತಿಳಿಯದೆಯೋ ಆತ ನಿರ್ಬಂಧಿತನಾಗಬಹುದು. ಅದನ್ನು ಗಮನದಲ್ಲಿರಿಸಿ
ಪ್ರತ್ಯುಪಕಾರದ ಅಂಶವೆನ್ನಲಾಗಿದೆ.

## ತಾತ್ಕಾಲಿಕ ದಾನ

ತಾತ್ಕಾಲಿಕ ದಾನವೂ ಜನಸೇವೆಯ ಒಂದು ರೂಪವಾಗಿದೆ. ನಿರ್ದಿಷ್ಟ ಕಾಲದ ತ
ಉಪಯೋಗಿಸಿದ ಬಳಿಕ ಮರಳಿಸುವ ನಿಬಂಧನೆಯಿರಿಸಿ, ಏನಾದರೂ ವಸ್ತುವ
ಆವಶ್ಯಾರ್ಥಿಗಳಿಗೆ ನೀಡುವುದನ್ನು ಸಾಮಾನ್ಯವಾಗಿ ತಾತ್ಕಾಲಿಕ ದಾನ ಎನ್ನಲಾಗುತ್ತ
ತಾತ್ಕಾಲಿಕ ದಾನವನ್ನು ಅತ್ಯುತ್ತಮ ದಾನ ಮತ್ತು ಉಡುಗೊರೆಯೆಂದು ಪ್ರವ
ವಚನಗಳಲ್ಲಿ ಪರಿಗಣಿಸಲಾಗಿದೆ. "ಗರ್ಭಿಣಿಯಾಗಿರುವ ಒಂಟೆ ಅಥವಾ ಬೆಳಗಾತ ಹಾ

ಂಜೆ ಒಂದು ಪಾತ್ರೆಯಲ್ಲಿ ಹಾಲು ಸುರಿಸುವ ಆಡನ್ನು ನೀಡುವುದು ಉತ್ತಮ ಾನವಾಗಿದೆ." (ಬುಖಾರಿ)

ಒಬ್ಬನು ಒಬ್ಬ ಗ್ರಹಸ್ಥನಿಗೆ ಬೆಳಿಗ್ಗೆ ಒಂದು ಸಂಜೆ ಒಂದು ಪಾತ್ರೆ ತುಂಬ ಹಾಲು ೂಡುವ ಒಂಟೆ ಕೊಟ್ಟರೆ ಅದು ಅತಿ ದೊಡ್ಡ ಪುಣ್ಯ ಕಾರ್ಯವಾಗಿದೆ. (ಮುಸ್ಲಿಮ್)

"ಯಾರಿಗಾದರೂ ಕೆಲವು ದಿನಗಳಿಗಾಗಿ ಹಾಲು ಕೊಡುವ ಪ್ರಾಣಿಯನ್ನು ಅಥವಾ ೆಳ್ಳಿಯನ್ನು ನೀಡಿದರೆ ಅಥವಾ ಯಾರಿಗಾದರೂ ದಾರಿ ತೋರಿಸಿದರೆ ಒಬ್ಬ ಗುಲಾಮನನ್ನು ್ವತಂತ್ರಗೊಳಿಸಿದ ಪ್ರತಿಫಲ ದೊರೆಯುತ್ತದೆ. (ತಿರ್ಮಿದಿ)

ಬೆಳ್ಳಿ ನೀಡುವುದೆಂದರೆ ಸಾಲವೆಂದು ತಿರ್ಮಿದಿ ಸ್ಪಷ್ಟಪಡಿಸಿದ್ದಾರೆ. ಇಲ್ಲಿ ವಿಶೇಷವಾಗಿ ಮನಿಸಬೇಕಾದ ಅಂಶವೆಂದರೆ ಈ ಹದೀಸ್‌ನಲ್ಲಿ ಸಾಲವಾಗಿ ನೀಡುವ ಹಣವನ್ನು, ಾತ್ಕಾಲಿಕ ಬಳಕೆಗಾಗಿ ನೀಡುವ ಪ್ರಾಣಿಯನ್ನು ದಾನವೆಂದು ವರ್ಣಿಸಲಾಗಿದೆ. ನಿರ್ದಿಷ್ಟ ವಧಿಯ ಬಳಿಕ ಅದನ್ನು ಮರಳಿ ಪಡೆದರೂ ಸಂಕಷ್ಟದ ಸಂದರ್ಭಗಳಲ್ಲಿ ಅಂಥ ಾತ್ಕಾಲಿಕ ದಾನಗಳು ಮಾನವರಿಗೆ ಬಹಳಷ್ಟು ಉಪಕಾರ ಮತ್ತು ಸಹಾಯಕವಾಗು ುದರಿಂದಲೇ ಅದನ್ನು ದಾನವೆಂದು ಪರಿಗಣಿಸಲಾಗಿದೆ. ಆದ್ದರಿಂದ ಅಂಥ ತಾತ್ಕಾಲಿಕ ಾನಗಳು ಒಂದು ರೀತಿಯ ಸೇವೆಯಾಗಿದೆ. ಈ ಪ್ರವಾದಿ ವಚನದಲ್ಲಿ ಪ್ರಾಣಿಯ ಹಾಲಿನ ಗ್ಗೆ ಮಾತ್ರ ಹೇಳಲಾಗಿದೆ. ಆದರೂ ಪ್ರಾಣಿಯ ರೋಮ, ಉಣ್ಣೆ, ಸೆಗಣಿ ಇತ್ಯಾದಿಗಳು ್ರಸ್ತುತ ವಿಧಿಯಲ್ಲಿ ಸೇರಿದೆ.

ಒಂದು ಹದೀಸ್‌ನಲ್ಲಿ ಹೀಗಿದೆ: "ದೇವ ಮಾರ್ಗದಲ್ಲಿ ಒಂದು ಜೋಡಿ ವಸ್ತು ಳನ್ನು ದಾನ ನೀಡುವಾತನನ್ನು ಅಂತ್ಯ ದಿನದಲ್ಲಿ ಸ್ವರ್ಗದ ಎಲ್ಲ ಬಾಗಿಲುಗಳಿಂದಲೂ, ಓ ದೇವನ ದಾಸನೇ! ನೀನು ಮಹಾ ಪುಣ್ಯ ಕಾರ್ಯ ಮಾಡಿರುವೆ ಎಂದು ಕರೆಯ ಾಗುವುದು." (ಬುಖಾರಿ)

ಇನ್ನೊಂದು ಹದೀಸ್‌ನಲ್ಲಿ ಹೀಗೆ ವಿವರಿಸಲಾಗಿದೆ, "ಓರ್ವನು ತನ್ನ ಸಂಪೂರ್ಣ ಕಣದಿಂದ ಒಂದು ಜೋಡಿಯನ್ನು ದೇವ ಮಾರ್ಗದಲ್ಲಿ ವೆಚ್ಚ ಮಾಡಿದರೆ ಅಂತ್ಯ ಿನದಲ್ಲಿ ಸ್ವರ್ಗದ ಕಾವಲುಗಾರರು ಆತನನ್ನು ಎಲ್ಲ ಕಡೆಗಳಿಂದಲೂ ಸ್ವಾಗತಿಸುವರು. ವರಲ್ಲಿ ಪ್ರತಿಯೊಬ್ಬರೂ ಅವರ ಕೈಗಳಲ್ಲಿರುವ ಅನುಗ್ರಹಗಳನ್ನು ಸ್ವೀಕರಿಸಲಿಕ್ಕಾಗಿ ತನನ್ನು ಆಮಂತ್ರಿಸುವರು." "ಒಂದು ಜೋಡಿ ಖರ್ಚು ಮಾಡುವುದೆಂದರೇನು?" ಎಂದು ಚಾರಿಸಿದಾಗ ಪ್ರವಾದಿಯವರು ಹೇಳಿದರು, "ಒಂಟೆಯಾಗಿದ್ದರೆ ಎರಡು ಒಂಟೆ, ನವಾಗಿದ್ದರೆ ಎರಡು ದನ." (ನಸಾಈ)

ಈ ಹದೀಸ್‌ಗಳಲ್ಲಿ ದಾನಧರ್ಮಗಳ ಪುಣ್ಯವನ್ನು ವಿವರಿಸುತ್ತಾ ದೇವಮಾರ್ಗದಲ್ಲಿ ಹೆಚ್ಚೆಚ್ಚು ವ್ಯಯಿಸುವಂತೆ ಶ್ರೀಮಂತರಿಗೆ ಪ್ರೇರಣೆ ನೀಡಲಾಗಿದೆ. ಅದರೊಂದಿಗೆ ಸಮಾಜದ ದುರ್ಬಲ ವರ್ಗಗಳ ಬೇಡಿಕೆಗಳನ್ನು ಗಮನದಲ್ಲಿರಿಸಿ ಅವುಗಳನ್ನು ಈಡೇರಿಸುವಂತೆ ಉಪದೇಶಿಸಲಾಗಿದೆ. ಒಂದೇ ವರ್ಗದ ಜೋಡಿ ವಸ್ತುಗಳು ದೊರೆತರೆ ಮಾತ್ರ ಮಾನವರ

ಕೆಲವು ಬೇಡಿಕೆಗಳು ಈಡೇರಬಹುದು. ಗದ್ದೆ ಉಳಲು ಹಾಗೂ ಗಾಡಿ ಎಳೆಯಲು ಜೋಡಿ ಪ್ರಾಣಿಗಳ ಅಗತ್ಯವಿದೆ. ಹಾಗೆಯೇ ಖರ್ಚಿನ ಆಧಿಕ್ಯದಿಂದ ಒಂದು ದನ ದಾನವಾ ದೊರೆತರೂ ಯಾವುದಕ್ಕೂ ಸಾಕಾಗದ ಸಂದರ್ಭವೂ ಇದೆ. ಈಡೇರಿಸುವ ಬೇಡಿಕೆಗಳ ಗಾತ್ರದ ಪ್ರಮಾಣದಲ್ಲಿಯೇ ಪುಣ್ಯವು ಹೆಚ್ಚು ಕಡಿಮೆಯಾಗುತ್ತದೆ. ಹದೀಸ್‌ಗಳಲ್ಲಿ ಪ್ರಸ್ತಾಪಿಸಲಾಗಿರುವ ದನವು ಕೇವಲ ಒಂದು ಸಂಕೇತವಾಗಿದೆ. ಹಣ, ವಸ್ತ್ರ, ಕೃಷಿ ಉಪಕರಣಗಳು, ಯಂತ್ರಗಳು ಇತ್ಯಾದಿ ನಿತ್ಯ ಜೀವನದಲ್ಲಿ ಮಾನವರಿಗೆ ಉಪಯುಕ್ತ ವಾಗಿರುವ ಎಲ್ಲಾ ವಸ್ತುಗಳೂ ಈ ವ್ಯಾಪ್ತಿಯಲ್ಲಿ ಸೇರುತ್ತವೆ. ಕೆಲವರು ಇದಕ್ಕೆ ಫೀಸಬೀಲಿಲ್ಲಾಹ್(ಅಲ್ಲಾಹನ ಮಾರ್ಗದಲ್ಲಿ ಹೋರಾಟ)ದ ಅರ್ಥ ಕಲ್ಪಿಸಿದ್ದಾರೆ.

## ಪಾಲುದಾರಿಕೆ

ವ್ಯಾಪಾರದಲ್ಲಿ ಹಣ ಮತ್ತು ಶ್ರಮದ ಅಗತ್ಯವಿರುತ್ತದೆ. ಕೆಲವರಲ್ಲಿ ಅಗತ್ಯ ವಿರುವಷ್ಟು ಹಣವಿದ್ದರೂ ಅವರಿಗೆ ಸೂಕ್ತ ರೀತಿಯಲ್ಲಿ ದುಡಿಯಲು ಅಥವಾ ಪರಿಶ್ರಮಿಸಲು ಸಾಧ್ಯವಾಗುವುದಿಲ್ಲ. ಇತರ ಕೆಲವರಾದರೋ ದುಡಿಯಲು ಸಮರ್ಥರಾಗಿದ್ದರೂ ಅವರ ಬಳಿ ಸಾಕಷ್ಟು ಹಣವಿರುವುದಿಲ್ಲ. ಇಂಥ ಸಂದರ್ಭಗಳಲ್ಲಿ ಶ್ರಮ ಮತ್ತು ಹಣವನ್ನು ಸಮನ್ವಯಗೊಳಿಸುವ ಕ್ರಮವನ್ನು ಇಸ್ಲಾಮಿನ ಸಾಂಕೇತಿಕ ಭಾಷೆಯಲ್ಲಿ 'ಮುದಾರಿಬ (ಲಾಭದಲ್ಲಿ ಪಾಲುದಾರಿಕೆಯ ವ್ಯಾಪಾರ) ಎಂದು ಕರೆಯಲಾಗುತ್ತದೆ. ಅರ್ಥಾತ್, ಹಣ ವಿರುವವರು ವ್ಯಾಪಾರದಲ್ಲಿ ಹಣವನ್ನು ಹೂಡುವುದು. ಪರಿಶ್ರಮಿಸಬಲ್ಲವರು ತಮ್ಮ ಶ್ರಮವನ್ನು ಹೂಡುವುದು, ಮುದಾರಿಬವನ್ನು ಇಬ್ನು ಅಸೀರ್ ಹೀಗೆ ವಿವರಿಸುತ್ತಾರೆ ಲಾಭದಲ್ಲಿ ಒಂದು ನಿರ್ದಿಷ್ಟ ಪಾಲನ್ನು ನಿರ್ಣಯಿಸಿ ಒಬ್ಬನು ವ್ಯಾಪಾರಕ್ಕಾಗಿ ಹಣ ನೀಡುವುದಾಗಿದೆ ಮುದಾರಿಬ. ಇದು ಎಲ್ಲ ಸಂದರ್ಭಗಳಲ್ಲಿಯೂ ಧರ್ಮಸಮ್ಮತವಾಗಿದೆ ಏಕೆಂದರೆ ಜನರು ಎರಡು ವಿಧದವರಿದ್ದಾರೆ. ಕೆಲವರ ಬಳಿ ಹಣವಿರಬಹುದು. ಅವರಿ ಆ ಹಣವನ್ನು ಸರಿಯಾಗಿ ಉಪಯೋಗಿಸಲು ತಿಳಿದಿರುವುದಿಲ್ಲ. ಇತರ ಕೆಲವರಿ ಹಣವನ್ನು ಸರಿಯಾಗಿ ಉಪಯೋಗಿಸಲು ತಿಳಿದಿದ್ದರೂ ಅವರ ಕೈ ಖಾಲಿಯಾಗಿರುತ್ತದೆ ಇಂಥ ಸಂದರ್ಭಗಳಲ್ಲಿ ಮುದಾರಿಬ ಅನಿವಾರ್ಯವಾಗುತ್ತದೆ. ಆ ಮೂಲಕ ಸಿರಿವಂತ ಮತ್ತು ಆವಶ್ಯಾರ್ಥಿಗಳ ಬೇಡಿಕೆ ಈಡೇರಿ ಎಲ್ಲರ ಆರ್ಥಿಕ ಸುಧಾರಣೆ ಸಾಧ್ಯವಾಗುವುದು ಪ್ರವಾದಿಯವರ(ಸ) ಕಾಲದಲ್ಲಿಯೇ ಈ ಸಂಪ್ರದಾಯ ಜಾರಿಯಲ್ಲಿತ್ತು. ಸಹಾಬಿಗಳ ಅದನ್ನು ಉಳಿಸಿ ವ್ಯಾವಹಾರಿಕಗೊಳಿಸಿದರು.

ಅಬ್ದುಲ್ಲಾ ಬಿನ್ ಹಿಶಾಮ್‌ರ ಒಂದು ವರದಿಯು ಅದಕ್ಕೆ ಸಾಕ್ಷಿಯಾಗಿದೆ. ಅವರು ಹೇಳುತ್ತಾರೆ, "ನನ್ನ ಬಾಲ್ಯದಲ್ಲಿ ತನ್ನ ತಾಯಿಯವರು ನನ್ನನ್ನು ಪ್ರವಾದಿಯವರ(ಸ) ಬಳಿ ಕರೆದೊಯ್ದಾಗ ಪ್ರವಾದಿಯವರು(ಸ) ನನ್ನ ತಲೆಯನ್ನು ನಯವಾಗಿ ನೇವರಿಸಿ ಅನುಗ್ರಹ ಗಳಿಗಾಗಿ ಪ್ರಾರ್ಥಿಸಿದರು. ಇದರಿಂದ ನನ್ನ ವ್ಯಾಪಾರದಲ್ಲಿ ತುಂಬಾ ಅಭಿವೃದ್ಧಿಯಾಯಿತು.' ಅವರ ಮೊಮ್ಮಗ ಸಹ್ರ್ ಬಿನ್ ಮಅಬದ್ ಹೇಳುತ್ತಾರೆ, "ನನ್ನ ಪಿತಾಮಹ

ಜೊತೆಯಲ್ಲಿ ಪೇಟೆಗೆ ಹೋಗುತ್ತಿದ್ದೆ. ಅಬ್ದುಲ್ಲಾ ಬಿನ್ ಉಮರ್ ಮತ್ತು ಅಬ್ದುಲ್ಲಾ ಬಿನ್ ಝುಬೈರ್‌ರು ಅವರೊಡನೆ ಸಂಭಾಷಣೆ ನಡೆಸಿ ವ್ಯಾಪಾರದಲ್ಲಿ ಅವರನ್ನು ಸಹಭಾಗಿಗೊಳಿಸಬೇಕೆಂದು ವಿನಂತಿಸಿದರು. ಕೆಲವೊಮ್ಮೆ ಒಂದು ಒಂಟೆ ಹೊರುವಷ್ಟು ವಸ್ತುಗಳನ್ನು ಲಾಭವಾಗಿ ಪಡೆದು ಅವರ ಮನೆಗಳಿಗೆ ಕಳುಹಿಸಿ ಕೊಡುತ್ತಿದ್ದರು."

(ಬುಖಾರಿ)

ವ್ಯಾಪಾರದಲ್ಲಿ ಪಾಲುದಾರಿಕೆಯು ಧರ್ಮಸಮ್ಮತವೆಂದು ಕುರ್‌ಆನ್, ಹದೀಸ್ ಮತ್ತು 'ಇಜ್‌ಮಾಅ್'ನಿಂದ (ವಿದ್ವಾಂಸರ ಒಮ್ಮತಾಭಿಪ್ರಾಯ) ದೃಢಗೊಂಡಿದೆಯೆಂದು ಇಮಾಮ್ ಅಬುಲ್ ಕಾಸಿಮ್ ಖಿರ್ಕಿ ಅಭಿಪ್ರಾಯ ಪಟ್ಟಿದ್ದಾರೆ. 'ಪಾಲು ವ್ಯಾಪಾರದ ಧರ್ಮಸಮ್ಮತಿಯ ಕುರಿತು ಮುಸ್ಲಿಮರಲ್ಲಿ ಸಾಮಾನ್ಯವಾಗಿ ಒಮ್ಮತಾಭಿಪ್ರಾಯವಿದೆ. ಅದರ ಕೆಲವು ರೂಪದ ಬಗ್ಗೆ ಮಾತ್ರ ಭಿನ್ನಮತವಿದೆ. (ಮುಗ್ನಿ)

ಪಾಲುದಾರಿಕೆಯು ಹಣದಲ್ಲಿಯೂ ಆಗಬಹುದು. ಶ್ರಮದಲ್ಲಿಯೂ ಆಗಬಹುದು. ಎರಡಕ್ಕೂ ಬಹಳ ಪ್ರಾಮುಖ್ಯತೆಯಿದೆ. ಇಂದು ವ್ಯಾಪಾರೀ ರಂಗವು ಕಡಿಮೆ ಹಣದಿಂದ ನಡೆಸಲಾಗದಷ್ಟು ಸಂಕೀರ್ಣವಾಗಿದೆ. ಆದ್ದರಿಂದ ದೊಡ್ಡ ಮಟ್ಟದ ವ್ಯಾಪಾರವನ್ನು ಬಯಸುವ ಹಲವರು ಸೇರಿ ರಚಿಸುವ ಲಿಮಿಟೆಡ್ ಕಂಪೆನಿಗಳ ಮೂಲಕ ಈಗ ವ್ಯಾಪಾರ ನಡೆಸುತ್ತಿದ್ದಾರೆ. ಕಡಿಮೆ ಹಣವಿರುವವರಿಗೆ ಪಾಲುದಾರಿಕೆಯ ಮೂಲಕ ಅಭಿವೃದ್ಧಿ ಹೊಂದಲು ಸಾಧ್ಯವಾಗುವ ಅಂಥ ಕಂಪೆನಿಗಳ ಸ್ಥಾಪನೆಯು ಜನಸೇವೆಯ ಒಂದು ರೂಪವೇ ಆಗಿದೆ.

ಇಂದಿನ ಕಾಲದಲ್ಲಿ ತಂತ್ರಜ್ಞಾನಕ್ಕೂ ವಾಣಿಜ್ಯ ಅನುಭವಕ್ಕೂ ಬಹಳ ಮಹತ್ವವಿದೆ. ಅವುಗಳ ವಿನಾ ವ್ಯಾಪಾರಿ ಸಂಸ್ಥೆ ಅಥವಾ ಫ್ಯಾಕ್ಟರಿಯನ್ನು ನಡೆಸಲು ಸಾಧ್ಯವಿಲ್ಲ. ಘನ ಉದ್ದಿಮೆಗಳಿಗೆ ವಿಭಿನ್ನ ರೀತಿಯಲ್ಲಿರುವ ತಾಂತ್ರಿಕ ತಜ್ಞರ ಅಗತ್ಯವಿದೆ. ನುರಿತ ತಾಂತ್ರಿಕ ತಜ್ಞರಿಗೂ ಹಣವಿಲ್ಲದ ಕಾರಣದಿಂದ ಕೈಗಾರಿಕಾ ರಂಗದಲ್ಲಿ ಮುಂದುವರಿಯಲು ಸಾಧ್ಯವಿಲ್ಲದಂತಹ ಸ್ಥಿತಿಯಿದೆ. ತಮ್ಮ ವ್ಯಾಪಾರೋದ್ದಿಮೆಗಳಲ್ಲಿ ಅಂಥ ತಾಂತ್ರಿಕ ತಜ್ಞರಿಗೆ ಪಾಲುದಾರಿಕೆ ನೀಡುವುದರಿಂದ ಅವರಿಗೆ ನೆರವಾದಂತಾಗುತ್ತದೆ. ಆದರೆ ಇಂದಿನ ಬಂಡವಾಳಶಾಹೀ ಮನಸ್ಸು ಅವರನ್ನು ಕೆಲಸಕ್ಕೆ ನೇಮಿಸಿದರೂ ವ್ಯಾಪಾರದಲ್ಲಿ ಅವರಿಗೆ ಪಾಲುದಾರಿಕೆ ನೀಡಲು ಸಿದ್ಧವಿಲ್ಲ.

## ಬೇಸಾಯದಲ್ಲಿ ಪಾಲುದಾರಿಕೆ

ಕೃಷಿ ರಂಗದಲ್ಲಿಯೂ ಇಂಥ ಜಂಟಿ ಉದ್ದಿಮೆಗಳಿಗೆ ಅವಕಾಶವಿದೆ. ದೊಡ್ಡ ಫಾರ್ಮ್‌ಗಳ ನಿರ್ಮಾಣವಾಗಿ, ಕೃಷಿ ವಿಧಾನದಲ್ಲಿ ಆಮೂಲಾಗ್ರ ಬದಲಾವಣೆಯಾಗಿ, ಕೃಷಿ ರಂಗದಲ್ಲಿ ಯಾಂತ್ರೀಕರಣ ಸಾರ್ವತ್ರಿಕವಾಗಿರುವ ಹಿನ್ನಲೆಯಲ್ಲಿ ಇಂತಹ ಜಂಟಿ ವ್ಯವಹಾರಗಳ ಪ್ರಾಮುಖ್ಯತೆ ಹೆಚ್ಚಿದೆ. ಗೇಣಿಗೆ ಪಡೆದು ಬೇಸಾಯ ಮಾಡುವುದನ್ನು ಪ್ರವಾದಿ ವಚನಗಳು ದೃಢೀಕರಿಸಿವೆ. ಒಬ್ಬನ ಜಮೀನಿನಲ್ಲಿ ಬೇರೊಬ್ಬನು ಬೇಸಾಯ

ಮಾಡಿ ಅದರಿಂದ ದೊರೆಯುವ ಆದಾಯವನ್ನು ನಿರ್ದಿಷ್ಟ ಶರತ್ತಿನಂತೆ ಉಭಯತ್ರರು ಹಂಚಿಕೊಳ್ಳುವುದೇ ಗೇಣಿಯ ರೀತಿಯಾಗಿದೆ.

ಅಬೂಹುರೈರಾರ(ರ) ವರದಿ: ವಲಸೆಯ ಬಳಿಕ ಅನ್ಸಾರರು ತಮ್ಮ ಖರ್ಜೂರದ ತೋಟಗಳನ್ನು ತಮಗೂ ಮುಹಾಜಿರರಿಗೂ ಹಂಚಿಕೊಳ್ಳುವಂತೆ ಪ್ರವಾದಿಯವರಲ್ಲಿ(ಸ) ವಿನಂತಿಸಿದರು. ಅದಕ್ಕೆ ಪ್ರವಾದಿಯವರು(ಸ) ಒಪ್ಪಲಿಲ್ಲ. ಆಗ ಅನ್ಸಾರರು ಹೇಳಿದರು "ಹಾಗಾದರೆ ಮುಹಾಜಿರರು ನಮ್ಮ ತೋಟಗಳ ಮೇಲ್ನೋಟ ವಹಿಸಿ, ನೀರಾವರಿಯ ವ್ಯವಸ್ಥೆಯನ್ನು ಮಾಡಲಿ. ಆದಾಯವನ್ನು ಉಭಯತ್ರರಲ್ಲಿ ಹಂಚೋಣ." ಮುಹಾಜಿರರು ಅದನ್ನು ಅಂಗೀಕರಿಸಿದರು. (ಬುಖಾರಿ)

ಮದೀನಾದ ಎಲ್ಲ ಮುಹಾಜಿರ್ ಕುಟುಂಬಗಳು ಪೂರ್ವ ನಿರ್ಣಯದಂತೆ 1/3, 1/4ರ ಅನುಪಾತದಲ್ಲಿ ಸಾಮೂಹಿಕ ಬೇಸಾಯದಲ್ಲಿ ಸೇರಿದ್ದುವು ಹಾಗೂ ಸಹಾಬಿಗಳಲ್ಲಿ ಅಲಿ, ಸಅದ್, ಅಬ್ದುರ್ರಹ್ಮಾನ್ ಹಾಗೂ ತಾಬಈಗಳಲ್ಲಿ ಉಮರ್ ಬಿನ್ ಅಬ್ದುಲ್ ಅಝೀಝ್, ಕಾಸಿಮ್ ಬಿನ್ ಮುಹಮ್ಮದ್, ಉರ್ವಾ ಬಿನ್ ಝುಬೈರ್, ಅಬೂಬಕರ್, ಉಮರ್ ಮತ್ತು ಅಲಿಯ ಕುಟುಂಬದವರು ಹಾಗೂ ಇಬ್ನು ಸೀರೀನ್ ಹಾಗೆಯೇ ಮಾಡಿದ್ದರು ಎಂದು ಅಬೂ ಜಅ್‌ಫರ್ ಹೇಳಿದ್ದಾರೆ.

ಅಬ್ದುರ್ರಹ್ಮಾನ್ ಬಿನ್ ಅಸ್ವದ್ ಹೀಗೆ ಹೇಳಿದ್ದಾರೆ, "ನಾನು ಅಬ್ದುರ್ರಹ್ಮಾನ್ ಬಿನ್ ಯಝೀದ್‌ರ ಜತೆಯಲ್ಲಿ ಜಂಟಿ ಬೇಸಾಯದಲ್ಲಿ ಭಾಗಿಯಾಗಿದ್ದೆ. ಹ. ಉಮರ್‌ರು(ರ) ತಮ್ಮ ತೋಟಗಳನ್ನು ಈ ಕೆಳಗಿನ ಶರತ್ತುಗಳ ಆಧಾರದಲ್ಲಿ ಗೇಣಿಗೆ ನೀಡುತ್ತಿದ್ದರು. ಬೀಜ ಇತ್ಯಾದಿ ಆವಶ್ಯಕ ವಸ್ತುಗಳನ್ನು ಅವರೇ ನೀಡಿದರೆ ಉತ್ಪನ್ನದ ಅರ್ಧಾಂಶ ನೇಗಿಲು ಬೀಜ ಇತ್ಯಾದಿಗಳನ್ನು ರೈತನೇ ಒದಗಿಸಿದರೆ ಉತ್ಪನ್ನದ 2/3 ರೈತನಿಗೆ, ಉಳಿದದ್ದು ಅವರಿಗೆ ನೀಡಬೇಕು."

ಭೂಮಾಲಿಕ ಮತ್ತು ರೈತನು ಒಟ್ಟಾಗಿ ಖರ್ಚು ಮಾಡಿ ಆದಾಯವನ್ನು ನಿರ್ದಿಷ್ಟ ಶರತ್ತಿನನ್ವಯ ಹಂಚಿಕೊಳ್ಳುವುದರಲ್ಲಿ ಯಾವುದೇ ಅಡ್ಡಿಯಿಲ್ಲವೆಂದು ಹಸನ್ ಬಸ್ರೀಯವರು ಅಭಿಪ್ರಾಯಪಟ್ಟಿದ್ದಾರೆ. ಇಮಾಮ್ ಝುಹ್ರಿಯವರಿಗೂ ಅದೇ ಅಭಿಪ್ರಾಯವಿದೆ.

ಹಸನ್ ಬಸ್ರೀ ಹೇಳುತ್ತಾರೆ- ದುಡಿಯುವವನಿಗೆ 1/2 ಪಾಲು ಎಂಬ ಶರತ್ತಿನಲ್ಲಿ ಹತ್ತಿಯನ್ನು ನೀಡಬಹುದಾಗಿದೆ. ಇಬ್ನು ಸೀರೀನ್, ಅತಾ, ಹಕಮ್, ಝುಹ್ರೀ ಮತ್ತು ಕತಾದರ ಅಭಿಪ್ರಾಯದಲ್ಲಿ ನೂಲು ತಯಾರಿಸಿ, ಸಿದ್ಧಗೊಂಡ ಬಟ್ಟೆಯಲ್ಲಿ 1/3 ಅಥವಾ 1/4ರ ಪಾಲುದಾರಿಕೆಯಲ್ಲಿ, ಒದಗಿಸಲೂ ಬಹುದಾಗಿದೆ.

ಆದಾಯದ 1/3 ಅಥವಾ 1/4 ಮಾಲಿಕನಿಗೆ ದೊರೆಯಬೇಕೆಂಬ ಶರತ್ತಿನಲ್ಲಿ ನಿರ್ದಿಷ್ಟ ಅವಧಿಗೆ ಜಾನುವಾರುಗಳನ್ನು ಗೇಣಿಗೆ ಕೊಡಬಹುದೆಂದು ಮಅ್‌ಮರ್ ಅಭಿಪ್ರಾಯ ಪಟ್ಟಿದ್ದಾರೆ. (ಬುಖಾರಿ)

ಉತ್ಪಾದನಾ ಸಂಪನ್ಮೂಲಗಳು ಮತ್ತು ಮಾನವ ಶಕ್ತಿ ಮಾನವರಿಗೆ ಏಕಪ್ರಕಾರ ಉಪಯುಕ್ತವಾಗುವಂತಹ ವಾತಾವರಣವನ್ನು ಇಸ್ಲಾಮ್ ಸೃಷ್ಟಿಸಬಯಸುತ್ತದೆಂದು ಈ

ವರಣೆಗಳಿಂದ ನಾವು ತಿಳಿಯಬಹುದು. ಲೌಕಿಕ ಸಂಪನ್ಮೂಲಗಳು ಮತ್ತು ಮಾನವ ಶಕ್ತಿ ರಿಯಾಗಿ ಉಪಯೋಗಿಸದೆ ಹಾಳಾಗುತ್ತಿರುವುದು ಇಂದು ಸಮಾಜ ಎದುರಿಸುತ್ತಿರುವ ತಿ ದೊಡ್ಡ ದುರಂತ. ಇವೆರಡರ ಸೂಕ್ತ ಉಪಯೋಗದಿಂದ ಮಾತ್ರ ಯಾವುದೇ ಮಾಜ ಅಭಿವೃದ್ಧಿ ಹೊಂದಲು ಸಾಧ್ಯವೆಂಬುದು ನಿರ್ವಿವಾದ.

## ಲಹೆ

ಮಾನವನ ಪ್ರತಿಯೊಂದು ಚಲನೆಗೆ ಸೂಕ್ತ ಸಲಹೆ ಆವಶ್ಯಕವಾಗಿದೆ. ಶಿಕ್ಷಣ, ್ಯಾಪಾರ, ಉದ್ಯೋಗ, ಕೈಗಾರಿಕೆ, ಕೃಷಿ, ಪ್ರಯಾಣ, ರೋಗ ಇತ್ಯಾದಿ ಜೀವನದಲ್ಲಿ ುಪದೇಶ ಅಥವಾ ಸಲಹೆಯ ಅಗತ್ಯವಿರುವ ಅನೇಕ ರಂಗಗಳಾಗಿವೆ. ಆಧುನಿಕ ಕಾಲದ ಯಮಾವಳಿಗಳಂತೆ ಪ್ರತಿಯೊಂದು ವಿಷಯದ ನಾನಾ ಅಂಶಗಳ ಕುರಿತು ತಿಳುವಳಿಕೆ ಡೆಯುವುದು ಯಾರಿಗೂ ಸಾಧ್ಯವಾಗದ ರೀತಿಯಲ್ಲಿ ಅತ್ಯಂತ ಜಟಿಲವಾಗಿದೆ. ಸರಿಯಾದ ಲಹೆ ದೊರೆಯದಿದ್ದರೆ ನಷ್ಟ ಮತ್ತು ತೊಂದರೆ ಅನುಭವಿಸಬೇಕಾದ ಸಂದರ್ಭಗಳು ೀವನದಲ್ಲಿ ಸಹಜವಾಗಿದೆ. ಆದ್ದರಿಂದ ವಿವಿಧ ವಿಷಯಗಳಲ್ಲಿ ಸಲಹೆ ನೀಡಲಿಕ್ಕಾಗಿ ಂದು ಅನೇಕ ಸಂಸ್ಥೆಗಳು ಹುಟ್ಟಿಕೊಂಡಿವೆ. ಇಂಥ ಸಲಹೆಗಳಿಗೆ ಇಸ್ಲಾಮಿನಲ್ಲಿ ಬಹಳ ುಹತ್ವವಿದೆ. ಸರಿಯಾದ ಸಲಹೆ ನೀಡುವುದಕ್ಕೆ ದೊರೆಯುವ ಪುಣ್ಯವನ್ನು ವಿವರಿಸುವ ದೀಸ್‌ಗಳಿಂದ ಅದು ನಮಗೆ ವ್ಯಕ್ತವಾಗುತ್ತದೆ.

"ಓರ್ವನು ಒಳಿತಿನ ಕಡೆಗೆ ಮಾರ್ಗದರ್ಶನ ನೀಡಿದರೆ ತನ್ನ ಉಪದೇಶದಂತೆ ಕರ್ಮ ರ್ವಹಿಸುವಾತನ ಪ್ರತಿಫಲದ ಅರ್ಧಾಂಶ ಆತನಿಗಿದೆ." (ಮುಸ್ಲಿಮ್) ಹಾಗೆಯೇ ತಪ್ಪು ಲಹೆ ನೀಡುವುದನ್ನು ವಂಚನೆಯೆಂದು ಹೇಳಲಾಗಿದೆ.

"ಯಾರಾದರೂ ತಿಳುವಳಿಕೆಯಿಲ್ಲದೆ ಫತ್ವಾ ನೀಡಿ, ಫತ್ವಾ ನೀಡಲ್ಪಟ್ಟವನು ಆ ಪ್ರಕಾರ ರ್ತಿಸಿದರೆ ಅದರ ಪಾಪ ಫತ್ವಾ ನೀಡಿದವನ ಮೇಲಿರುವುದು. ಓರ್ವನು ತನ್ನ ಹೋದರನಿಗೆ ಹಿತ ಅಥವಾ ಪ್ರಯೋಜನವಿಲ್ಲದ ಒಂದು ವಿಷಯವನ್ನು ಮನಃಪೂರ್ವಕ ುಪದೇಶಿಸಿದರೆ ಅದು ಸಹೋದರನನ್ನು ವಂಚಿಸಿದಂತಾಗುವುದು." (ಅಬೂದಾವೂದ್)

ಆಧುನಿಕ ನಾಗರಿಕತೆ ಮತ್ತು ಸಂಸ್ಕೃತಿಯು ಜಟಿಲ ಸಮಸ್ಯೆಗಳನ್ನು ಸೃಷ್ಟಿಸಿದೆ. ಂತಹ ವಿಷಯಗಳಲ್ಲಿ ಸರಿಯಾದ ಮಾರ್ಗದರ್ಶನ ನೀಡುವ, ನವೀನ ಸಂಕೇತ ಮತ್ತು ಂಪನ್ಮೂಲಗಳಿಂದ ಪ್ರಯೋಜನ ಪಡೆಯಲು ಅಗತ್ಯವಿರುವ ಉಪದೇಶಗಳನ್ನು ನೀಡುವ ಥವಾ ಆ ವಿಷಯಕ್ಕೆ ಸಂಬಂಧಿಸಿದ ಇಸ್ಲಾಮೀ ದೃಷ್ಟಿಕೋನವನ್ನು ಸರಿಯಾದ ರೀತಿಯಲ್ಲಿ ವರಿಸುವ ಯಾವೊಂದು ವ್ಯವಸ್ಥೆಯೂ ಇಂದು ನಮ್ಮ ಸಮಾಜದಲ್ಲಿಲ್ಲ.

## ುರ್ದಿತರಿಗೆ ನೆರವು

ಸಮಾಜದ ಮರ್ದಿತರಿಗೆ, ಸಂತ್ರಸ್ತ ಜನ ವಿಭಾಗಗಳಿಗೆ ನೆರವಾಗುವುದು ಜನಸೇವೆಯ ತ್ಯಂತ ಉದಾತ್ತ ರೂಪವಾಗಿದೆ. ಎಲ್ಲಾ ರೀತಿಯ ಅಕ್ರಮ ಮತ್ತು ಹಿಂಸೆಗಳನ್ನು ಇಸ್ಲಾಮ್

ವಿರೋಧಿಸುತ್ತದೆ. ಅದು ಯಾರಾದರೂ ವಿನಾ ಕಾರಣ ಅಕ್ರಮಕ್ಕೆ ಗುರಿಯಾದರೆ ಅದನ್ನು ಕೈಕಟ್ಟಿ ನೋಡಿ ನಿಲ್ಲಬಾರದೆಂದು ಸಮಾಜಕ್ಕೆ ಉಪದೇಶಿಸುತ್ತದೆ. ಅಕ್ರಮದ ವಿರುದ್ಧ ಸ್ವರವೆತ್ತಿ ಮರ್ದಿತನನ್ನು ಮರ್ದಕನಿಂದ ರಕ್ಷಿಸುವುದು ಸಮಾಜದ ಕರ್ತವ್ಯವೆಂದು ಸಾರಿದೆ. ಬರಾಅ್ ಬಿನ್ ಆಝಿಬ್ ಹೇಳುತ್ತಾರೆ, "ಪ್ರವಾದಿಯವರು ವಿಧಿಸಿದ ಏಳು ವಿಷಯಗಳಲ್ಲಿ ಮರ್ದಿತನಿಗೆ ನೆರವಾಗುವುದೂ ಒಂದಾಗಿದೆ. (ಬುಖಾರಿ, ಮುಸ್ಲಿಮ್)

ಮರ್ದಿತರಿಗೆ ನೆರವಾಗುವುದು ಸಾಮೂಹಿಕ ಕರ್ತವ್ಯ(ಫರ್ಝ್ ಕಿಫಾಯ)ವೆಂದು ಇಮಾಮ್ ನವವಿಯವರ ಅಭಿಮತ. ಒಳಿತನ್ನು ಆದೇಶಿಸುವುದು ಮತ್ತು ಕೆಡುಕನ್ನು ವಿರೋಧಿಸುವುದರಲ್ಲಿ ಅದೂ ಸೇರಿದೆ. (ಶರಹ್ ಮುಸ್ಲಿಮ್)

ಯಾರದಾದರೂ ಜೀವ, ಸಂಪತ್ತು, ಅಭಿಮಾನವನ್ನು ಆಕ್ರಮಿಸಿದರೆ, ಮನೆ ದೋಚಿದರೆ ಅಥವಾ ಅವನ ಆಸ್ತಿಯನ್ನು ಬೆಂಕಿಗಾಹುತಿ ಮಾಡಿದರೆ ಆತನಿಗೆ ನೆರವಾಗ ಬೇಕಾದುದು ಆತನ ಪರಿಸರದ ಜನರ ಕರ್ತವ್ಯವಾಗಿದೆ. ಕೆಲವಾರು ಮಂದಿಯ ನೆರವು ಆತನಿಗೆ ದೊರೆತರೆ ಎಲ್ಲರೂ ಆ ಕರ್ತವ್ಯದಿಂದ ಮುಕ್ತರಾಗುತ್ತಾರೆ. ಆದರೆ ಯಾರೂ ಅವನ ಸಹಾಯಕ್ಕೆ ಬರದಿದ್ದರೆ ಎಲ್ಲರೂ ಪಾಪಿಗಳಾಗುವರು.

ಮರ್ದಿತರಿಗೆ ಹಲವು ರೀತಿಯಲ್ಲಿ ನೆರವಾಗಬಹುದು. ಅದು ಕಾನೂನು ನೆರವು ಅಥವಾ ನೈತಿಕ ನೆರವು ಆಗಿರಬಹುದು. ಆರ್ಥಿಕ ಸ್ಥಿತಿಯನ್ನು ಉತ್ತಮಪಡಿಸುವುದೂ ಅದರಲ್ಲಿ ಸೇರಿದೆ. ಸಮಾಜದಲ್ಲಿ ಉಪೇಕ್ಷಿತ ಮತ್ತು ದರಿದ್ರನೆಂಬ ಪ್ರಜ್ಞೆಯನ್ನು ಹೋಗಲಾಡಿಸಿ, ಆತ್ಮವಿಶ್ವಾಸ ಮೂಡಿಸುವುದು ಕೂಡಾ ಮರ್ದಿತನ ನೆರವಿನಲ್ಲಿ ಸೇರಿದೆ. ಅವನ ಮೇಲೆ ಆಕ್ರಮಣವಾಗುವುದಾದರೆ ಅದನ್ನು ಪಡೆಯಬೇಕು. ಸಂಕಷ್ಟದಲ್ಲಿ ಅವನಿಗೆ ನೆರವಾಗಬೇಕು. ಮರ್ದಿತರಿಗೆ ನೆರವಾಗಿ ಅವರ ಸೇವೆ ಸಲ್ಲಿಸುವ ಮನೋಭಾವ ಮತ್ತು ದೃಢನಿಶ್ಚಯ ಸಮಾಜದಲ್ಲಿ ಬೆಳೆದು ಬರಬೇಕು. ಹಾಗಾದರೆ ಆ ಸಮಾಜದಲ್ಲಿ ಗಲಭೆ ಗೊಂದಲ, ಅರಾಜಕ ಸ್ಥಿತಿ ತೊಲಗುವುದು. ತೀರಾ ದುರ್ಬಲರಾದ ಜನರಿಗೂ ಶಾಂತಿ ಸಮಾಧಾನದಿಂದ ಬದುಕುವ ಪರಿಸ್ಥಿತಿಯು ಅಲ್ಲಿ ನಿರ್ಮಾಣವಾಗುವುದು.

## ಕಲ್ಯಾಣಕಾರಿ ಸೇವೆಗಳು

ಓರ್ವ ವ್ಯಕ್ತಿಗೆ ತನ್ನ ಬೇಡಿಕೆಗಳ ಈಡೇರಿಕೆಗಾಗಿ ಇತರರನ್ನು ಅವಲಂಬಿಸಬೇಕ ದಂತೆಯೇ ಸಮಾಜದ ಇತರರಿಗೂ ಅಂಥ ಬೇಡಿಕೆಗಳಿರಬಹುದು. ಕಲ್ಯಾಣಕಾರಿ ಸೇ ಯಿಂದ ಮಾತ್ರ ಅಂಥ ಬೇಡಿಕೆಗಳನ್ನು ಈಡೇರಿಸಬಹುದು. ಅಂತಹ ಸೇವೆಗಳಲ್ಲಿ ವಿಧಗಳಿವೆ. ಕೆಲವು ಸೇವೆಗಳು ಸಮಾಜದ ಸಾಮಾನ್ಯ ಬೇಡಿಕೆಗಳನ್ನು ಈಡೇರಿಸುತ್ತವೆ ಅದರ ಪ್ರಯೋಜನವು ಎಲ್ಲಾ ಪೌರರಿಗೆ ಅಥವಾ ಹೆಚ್ಚಿನವರಿಗೆ ದೊರೆಯುವುದು. ಇತ ಕೆಲವು ಸೇವಗಳಾದರೋ ಸಮಾಜದ ಕೆಲವು ವಿಶೇಷ ಬೇಡಿಕೆಗಳನ್ನು ಮಾತ್ರ ಈಡೇ ಸುತ್ತದೆ. ಹಾಗಿದ್ದರೂ ಅದರ ಒಟ್ಟು ಪ್ರಯೋಜನವು ಸಾರಾಸಗಟಾಗಿ ಸಮಾಜ ದೊರೆಯುತ್ತದೆ. ಈ ಎರಡೂ ವಿಧದ ಸೇವೆಗಳನ್ನು ಇಸ್ಲಾಮ್ ಪ್ರೋತ್ಸಾಹಿಸಿದೆ.

ಜನಪರ ಸೇವೆಗಳನ್ನು ವ್ಯಕ್ತಿಗಳೂ ಸಂಸ್ಥೆಗಳೂ ನಿರ್ವಹಿಸಬಹುದು. ಬಹುತೇಕ ಜನ ಕಲ್ಯಾಣ ಸೇವೆಗಳು ಕಲ್ಯಾಣ ರಾಷ್ಟ್ರದ ಹೊಣೆಗಾರಿಕೆಯಲ್ಲಿ ಸೇರಿವೆ. ತನ್ನ ಸಂಪನ್ಮೂಲಗಳ ಬಹುದೊಡ್ಡ ಪಾಲನ್ನು ರಾಷ್ಟ್ರವು ಅದರಿಂದ ವಿನಿಯೋಗಿಸುತ್ತದೆ. ಅದರ ಮಿತಿಯೆಷ್ಟು? ಒಂದರ ಕಾರ್ಯಕ್ಷೇತ್ರವು ಎಲ್ಲಿ ಕೊನೆಗೊಳ್ಳುತ್ತದೆ ಮತ್ತು ಇತರವುಗಳದ್ದು ಎಲ್ಲಿಂದ ಆರಂಭವಾಗುತ್ತದೆಂಬ ವಿಷಯಗಳು ಇಲ್ಲಿ ಚರ್ಚಾ ವಿಷಯವಲ್ಲ.

ಸಂಪನ್ಮೂಲಗಳ ಲಭ್ಯತೆಯ ಪ್ರಕಾರ ಅದರ ಕಾರ್ಯಕ್ಷೇತ್ರವು ಹೆಚ್ಚು ಕಡಿಮೆ ಯಾಗಬಹುದು. ರಾಷ್ಟ್ರ ಮತ್ತು ವ್ಯಕ್ತಿಗಳ ಮಧ್ಯೆ ಸೇವಾ ಕಾರ್ಯಗಳಲ್ಲಿ ಸಹಕಾರ ಮತ್ತು ಸಹಭಾಗಿತ್ವ ಸಾಧ್ಯವಿದೆ. ಮಾತ್ರವಲ್ಲ, ಅವು ಇರಲೇಬೇಕು. ಹಾಗಾದರೆ ಮಾತ್ರ ಆ ಮೂಲಕ ಉತ್ತಮ ಸಾಧನೆ ಮತ್ತು ಪ್ರಯೋಜನವನ್ನು ನಿರೀಕ್ಷಿಸಬಹುದು.

ಇಸ್ಲಾಮ್ ಅದರ ಎಲ್ಲ ವಿಧಿ ನಿಷೇಧಗಳಲ್ಲಿ ಮೂಲಭೂತವಾಗಿ ವ್ಯಕ್ತಿಗಳನ್ನು ಅಭಿಸಂಬೋಧಿಸುತ್ತದೆ. ವ್ಯಕ್ತಿಯೇ ಸಂಸ್ಥೆ ಮತ್ತು ಸರಕಾರ ಇತ್ಯಾದಿಗಳ ಬುನಾದಿಯಾಗಿದೆ ಮಷ್ಟೇ. ಅದರ ರೂಪ ಮತ್ತು ಸ್ವಭಾವವನ್ನು ಮಾನವನೇ ನಿರ್ಣಯಿಸುತ್ತಾನೆ. ಆದ್ದರಿಂದ ಸೇವೆಯ ವಿಷಯದಲ್ಲಿ ಇಸ್ಲಾಮ್ ಪ್ರಥಮತಃ ವ್ಯಕ್ತಿಗಳನ್ನು ಅಭಿಸಂಬೋಧಿಸುತ್ತದೆ.

## ಪರಿಸರ ಶುಚೀಕರಣ

ಜನರಲ್ಲಿ ಶುಚಿತ್ವ ಮನೋಭಾವವನ್ನು ಬೆಳೆಸುವುದು ಜನಕಲ್ಯಾಣದ ಪ್ರಮುಖ ಚಟುವಟಿಕೆಯಾಗಿದೆ. ಶುಚಿತ್ವ ಮತ್ತು ಶುಭ್ರತೆಯ ಪ್ರಾಮುಖ್ಯತೆ ಮತ್ತು ಅವಶ್ಯಕತೆಯ ಕುರಿತು ಜನಮನಗಳಲ್ಲಿ ಜಾಗೃತಿ ಮೂಡಿಸಬೇಕು. ಮಲಿನ ಮತ್ತು ಕೆಟ್ಟ ವಸ್ತುಗಳ ಅಪಾಯದ ಬಗ್ಗೆ ಎಚ್ಚರಿಕೆ ನೀಡಬೇಕು. ಅದರ ಬಗ್ಗೆ ತಿರಸ್ಕಾರ ಹುಟ್ಟಿಸುವುದು ಪ್ರಾಥಮಿಕವಾಗಿ ನಡೆಸಬೇಕಾದ ಶುಚೀಕರಣ ಚಟುವಟಿಕೆಯಾಗಿದೆ. ನಗರ ಮತ್ತು ಹಳ್ಳಿ ಗಳಲ್ಲಿ ಪರಿಸರ ಶುಚೀಕರಣ ಮತ್ತು ಮಾಲಿನ್ಯ ನಿರ್ಮೂಲನಕ್ಕಾಗಿ ಉತ್ತಮ ವ್ಯವಸ್ಥೆಯನ್ನು ಏರ್ಪಡಿಸಬೇಕು. ಜನರು ಮಲಿನ ವಾತಾವರಣದಲ್ಲಿ ಬಾಳುವ ಪರಿಸ್ಥಿತಿಯನ್ನು ತಡೆಯಲು ಪ್ರಯತ್ನಿಸಬೇಕು. ಇವು ಕೂಡಾ ಶುಚೀಕರಣ ಪ್ರಕ್ರಿಯೆಯ ಭಾಗವೇ ಆಗಿದೆ. ಈ ವಿಷಯಗಳು ಪಾಶ್ಚಾತ್ಯರ ಕೊಡುಗೆಯೆಂದು ಸಾಮಾನ್ಯವಾಗಿ ಭಾವಿಸಲಾಗುತ್ತದೆ. ಆದರೆ ಶುಚಿತ್ವ ಮತ್ತು ಪರಿಸರ ಶುಚೀಕರಣಕ್ಕೆ ಇಸ್ಲಾಮ್ ನೀಡಿರುವ ಮಹತ್ವ ಇಂದು ಹೆಚ್ಚಿನ ವರಿಗೆ ತಿಳಿದಿಲ್ಲ. ಮಾಲಿನ್ಯದೊಂದಿಗೆ ವೈಮನಸ್ಸು ಮತ್ತು ಶುಚಿತ್ವ ಹಾಗೂ ಶುಭ್ರತೆಯ ಬಗ್ಗೆ ಒಲವು ಮೂಡಿಸಲಿಕ್ಕಾಗಿ ಶಿಕ್ಷಣ ತರಬೇತಿ, ಪ್ರೋತ್ಸಾಹ, ಪ್ರೇರಣೆ ಇತ್ಯಾದಿ ಹಲವು ಮಾರ್ಗಗಳನ್ನು ಇಸ್ಲಾಮ್ ಸ್ವೀಕರಿಸಿದೆ. ಶುಚಿತ್ವದ ಬಗ್ಗೆ ಇಸ್ಲಾಮ್ ಅತ್ಯಂತ ಉದಾತ್ತವಾದ ಕಲ್ಪನೆಯನ್ನು ಎತ್ತಿ ಹಿಡಿದಿದೆ. ಅದರಂತೆ ಇಡೀ ಸಮಾಜವನ್ನು ಸಿದ್ಧಪಡಿಸುತ್ತದೆ.

## ಹಾದಿಯ ಅಡ್ಡಿ ಆತಂಕಗಳ ನಿವಾರಣೆ

ಒಂದು ದೇಶದ ಆರ್ಥಿಕ ಪ್ರಗತಿಯಲ್ಲಿ ಅಲ್ಲಿನ ಸಂಚಾರ ಸೌಲಭ್ಯಗಳಿಗೆ ಪ್ರಮುಖ ಪಾತ್ರವಿದೆ. ಸಂಚಾರ ರಸ್ತೆಗಳು ಸ್ವಚ್ಛ ಮತ್ತು ಸುರಕ್ಷಿತ ಹಾಗೂ ಪ್ರಯಾಣ ಸೌಲಭ್ಯವು

ಉತ್ತಮವಾಗಿರಬೇಕು. ರಸ್ತೆ ಮತ್ತು ಸೇತುವೆ ನಿರ್ಮಾಣ, ಇಕ್ಕಟ್ಟಾದ ರಸ್ತೆಗಳನ್ನು ಸಂಚಾರ
ಯೋಗ್ಯಗೊಳಿಸುವುದು, ಸಂಚಾರ ನಿಯಮಾವಳಿಗಳನ್ನು ರೂಪಿಸುವುದು ಇತ್ಯಾದಿ ಪ್ರಯಾಣ
ಸೌಲಭ್ಯಗಳನ್ನು ಒದಗಿಸುವುದರಿಂದ ದೇಶದ ಅಭಿವೃದ್ಧಿಯೂ ಅಷ್ಟೇ ಹೆಚ್ಚುತ್ತದೆ
ಆಧುನಿಕ ಯುಗವು ಆಕಾಶಯಾನದ ಮಾರ್ಗಗಳನ್ನು ತೆರೆದು ಆ ರಂಗದಲ್ಲಿಯೂ ಅನೇಕ
ಸೌಲಭ್ಯವನ್ನು ಒದಗಿಸುತ್ತವೆ. ಅದಕ್ಕೂ ಅನೇಕ ಸಮಸ್ಯೆಗಳಿದ್ದು ಅವುಗಳ ಪರಿಹಾರಕ
ಪ್ರಯತ್ನಗಳೂ ನಿರಂತರ ನಡೆಯುತ್ತದೆ.

ಸಂಚಾರಿ ರಸ್ತೆಗಳ ದೊಡ್ಡ ಅಡ್ಡಿ ಆತಂಕಗಳನ್ನು ನಿವಾರಿಸಿ, ಪ್ರಯಾಣವನ್ನು
ಅನುಕೂಲಗೊಳಿಸುವುದು ರಾಷ್ಟ್ರದ ಕರ್ತವ್ಯವಾಗಿದೆ. ಜಗತ್ತಿನ ಕಲ್ಯಾಣ ರಾಷ್ಟ್ರಗಳೆಲ್ಲವೂ
ಅದನ್ನು ತನ್ನ ಹೊಣೆಗಾರಿಕೆಯೆಂದು ಅಂಗೀಕರಿಸಿವೆ. ಆದರೂ ವ್ಯಕ್ತಿಗಳ ಸಹಕಾರ ಈ
ವಿಷಯದಲ್ಲಿ ಅತ್ಯಾವಶ್ಯಕವಾಗಿದೆ. ಶಿಕ್ಷಣ ಜನಜಾಗೃತಿಗಳ ಜತೆಗೆ ದೇವಭಯ, ಮಾನವ
ರೊಂದಿಗಿನ ಹಿತಾಕಾಂಕ್ಷೆ ಇತ್ಯಾದಿ ಗುಣಗಳು ಮೇಳೈಸಿರುವ ವ್ಯಕ್ತಿಗಳಿರುವಲ್ಲಿ ಇಂತಹ
ಚಟುವಟಿಕೆಗಳು ಬಹಳ ಸುಲಭವಾಗಿದೆ. ಅವು ಇಲ್ಲದಿದ್ದರೆ ಸಹಸ್ರಾರು ಯೋಜನೆಗಳನ್ನು
ರೂಪಿಸಿದರೂ ಸಂಚಾರದ ತೊಂದರೆಗಳಿಂದ ಮುಕ್ತವಾಗುವುದು ಸಾಧ್ಯವಿಲ್ಲ. ಪ್ರತಿಯೊಂದು
ಹೆಜ್ಜೆಯಲ್ಲಿಯೂ ಅಡ್ಡಿ ಆತಂಕಗಳು ಉಳಿದಿರುತ್ತವೆ. ದಿನ ರಾತ್ರೆಗಳಲ್ಲಿ ಅದನ್ನು ನಾವ
ಅನುಭವಿಸುತ್ತಲೂ ಇದ್ದೇವೆ.

ಇಸ್ಲಾಮೀ ದೃಷ್ಟಿಕೋನದಂತೆ ಇಂತಹ ಜನಕಲ್ಯಾಣಕಾರಿ ಸೇವೆಯು ಸರಕಾರದ
ಕರ್ತವ್ಯವಾಗಿದೆ. ಆದರೆ ವ್ಯಕ್ತಿಗಳಿಗೂ ಅದರಲ್ಲಿ ಪಾಲಿದೆ. ಅವರು ಅದರಲ್ಲಿ ವಹಿಸ
ಬೇಕಾದ ಪಾತ್ರದ ಪ್ರಾಮುಖ್ಯವನ್ನು ಒತ್ತಿ ಹೇಳಲಾಗಿದೆ. ಇಸ್ಲಾಮ್ ಸ್ಪಷ್ಟವಾಗಿ ವ್ಯಕ್ತಿ
ಗಳಿಗೆ ಬೋಧಿಸಿರುವ ಜನಕಲ್ಯಾಣ ಸೇವೆಗಳಲ್ಲಿ ಸಂಚಾರ ರಸ್ತೆಗಳನ್ನು ಶುಚಿಯಾಗಿ
ಡುವುದು ಮತ್ತು ಅದರ ಅಡಚಣೆಗಳನ್ನು ನಿವಾರಿಸುವುದೂ ಸೇರಿವೆ. ಈ ಕುರಿತು ಕೆಲವ
ಪ್ರವಾದಿ ವಚನಗಳು ಹೀಗಿವೆ. ಅಬೂ ಹುರೈರಾರ(ರ) ವರದಿ: 'ವಿಶ್ವಾಸಕ್ಕೆ 70ಕ್ಕೂ ಅಥವಾ
60ಕ್ಕೂ ಹೆಚ್ಚು ಶಾಖೆಗಳಿವೆ. ಅವುಗಳಲ್ಲಿ ಅತ್ಯುತ್ತಮವಾದುದು "ಲಾ ಇಲಾಹ ಇಲ್ಲಲ್ಲಾಹ್"
(ಅಲ್ಲಾಹನ ಹೊರತು ಆರಾಧ್ಯನಿಲ್ಲ) ಎಂಬ ಪವಿತ್ರ ವಚನವಾಗಿದೆ. ಅದರಲ್ಲಿ ಅತ್ಯಂತ
ಕೆಳಮಟ್ಟದ್ದು ದಾರಿಯಿಂದ ಅಡ್ಡಿ ಆತಂಕಗಳನ್ನು ನಿವಾರಿಸುವುದಾಗಿದೆ. ಲಜ್ಜೆಯೂ
ವಿಶ್ವಾಸದ ಒಂದು ಶಾಖೆಯಾಗಿದೆ.

(ಮುಸ್ಲಿಮ್)

ದೇವವಿಶ್ವಾಸದ ಮೂಲಕ ಮಾನವರಲ್ಲಿ ಸೃಷ್ಟಿಗಳಿಗೆ ನೆಮ್ಮದಿ ನೀಡುವ ಸದ್ಭಾವನ
ಜಾಗೃತವಾಗುತ್ತದೆ. ಆದ್ದರಿಂದ ಮಾನವ ಹೃದಯದಲ್ಲಿ ವಿಶ್ವಾಸವು ನಿಜಾರ್ಥದಲ್ಲಿ
ಬೇರೂರಿದರೆ ತನ್ನಿಂದ ಇತರರಿಗೆ ಹೆಚ್ಚೆಚ್ಚು ಪ್ರಯೋಜನ ದೊರೆಯಬೇಕೆಂದು ಮಾನವನು
ಬಯಸುತ್ತಾನೆ. ಅದರ ಒಂದು ಸಣ್ಣ ಅಂಶವನ್ನು ಈ ಹದೀಸ್‌ನಲ್ಲಿ ತೋರಿಸಲಾಗಿದೆ.
ದಾರಿಯಲ್ಲಿ ಯಾತ್ರಿಕರಿಗೆ ಅಡ್ಡಿ ಆತಂಕಗಳನ್ನೊಡ್ಡುವ ಅನಾವಶ್ಯಕ ವಸ್ತುಗಳನ್ನೂ

ಲಿನ್ಯಗಳನ್ನೂ ವಿಶ್ವಾಸಿಗಳಿಗೆ ಸಹಿಸಲಾಗುವುದಿಲ್ಲ. ಆದ್ದರಿಂದ ಅವುಗಳನ್ನು ಕಂಡ ತಲೇ ಆತ ಅಲ್ಲಿಂದ ಸರಿಸುವನು. ಇನ್ನೊಂದು ವರದಿ ಪ್ರಕಾರ ಪ್ರವಾದಿ ವರು(ಸ) ಹೀಗೆ ಹೇಳಿದರು. ದಾರಿಯಲ್ಲಿ ಜನರಿಗೆ ತೊಂದರೆಯಾಗುವ ಮರದ ಒಂದು ವೆಯನ್ನು ಕಡಿದು ತೊಲಗಿಸಿದ ಓರ್ವನು ಸ್ವರ್ಗದಲ್ಲಿ ತಿರುಗಾಡುತ್ತಿರುವುದನ್ನು ು ನೋಡಿದೆ."

(ಮುಸ್ಲಿಮ್, ವರದಿ: ಅಬೂಹುರೈರಾ)

ಜನರು ನಡೆಯುವ ಹಾದಿಯಲ್ಲಿದ್ದ ಅಡ್ಡಿಯನ್ನು ನಿವಾರಿಸಿದ್ದು ಆತನ ಸ್ವರ್ಗದ ರಿಯನ್ನು ಸುಗಮಗೊಳಿಸಿ ಸ್ವರ್ಗದ ಹೂದೋಟದಲ್ಲಿ ತಿರುಗಾಡುವ ಭಾಗ್ಯ ಗಿಸಿತೆಂಬುದೇ ಈ ವಚನದ ಸಾರಾಂಶ.

ಅಬೂ ಹುರೈರಾರ(ರ) ವರದಿ: ಓರ್ವನು ನಡೆಯುತ್ತಿದ್ದಾಗ ದಾರಿಯಲ್ಲಿ ದಟ್ಟವಾಗಿ ಬಿದ್ದ ಮುಳ್ಳುಗಳನ್ನು ಕಂಡು ಅದನ್ನು ಅವನು ಅಲ್ಲಿಂದ ಕಿತ್ತು ಹಾಕಿದನು. ಲ್ಲಹನು ಅವನ ಈ ಸೇವೆಯನ್ನು ಮನ್ನಿಸಿ ಆತನ ಪಾಪಗಳನ್ನು ಕ್ಷಮಿಸಿದನು.

(ಬುಖಾರಿ, ಮುಸ್ಲಿಮ್)

ಇನ್ನೊಂದು ವರದಿ ಹೀಗಿದೆ. "ಓರ್ವನು ನಡೆಯುತ್ತಿದ್ದಾಗ ದಾರಿಯಲ್ಲಿ ಒಂದು ಡ್ಡ ಮರದ ರೆಂಬೆ ಕಾಣಿಸಿತು. ಜನರಿಗೆ ತೊಂದರೆಯಾಗದಿರಲಿಕ್ಕಾಗಿ ನಾನು ಈ ವನ್ನು ಕಡಿದು ಬಿಡುತ್ತೇನೆಂದು ಅವನು ಮನದಲ್ಲಿ ಭಾವಿಸಿದ. ಅದಕ್ಕಾಗಿ ಅವನನ್ನು ಲ್ಲಹನು ಸ್ವರ್ಗದಲ್ಲಿ ಪ್ರವೇಶಗೊಳಿಸಿದನು. (ಬುಖಾರಿ)

ಅರ್ಥಾತ್ ಜನರು ಸಂಚರಿಸುವ ದಾರಿಯಲ್ಲಿ ತುಚ್ಛ ಅಡಚಣೆಗಳನ್ನು ನಿವಾರಿಸಿದರೂ ರ್ಗದಂತಹ ಶಾಶ್ವತ ಅನುಗ್ರಹಗಳಿಗೆ ಪಾತ್ರವಾಗುವಂತಹ ಜನಸೇವೆಯಾಗುತ್ತದೆ.

ತನಗೆ ಏನಾದರೂ ಉಪಯುಕ್ತವಾದ ವಿಷಯವನ್ನು ಕಲಿಸಿರೆಂದು ವಿನಂತಿಸಿದ ೂ ಬರಝ ಅಸ್ಲಮಿೂಯವರೊಡನೆ ಮುಸ್ಲಿಮರ ಸಂಚಾರ ಹಾದಿಯ ಅಡಚಣೆಯನ್ನು ರಿಸುವಂತೆ ಪ್ರವಾದಿಯವರು ಆದೇಶಿಸಿದರು. (ಮುಸ್ಲಿಮ್) ಕೇವಲ ಸಂಚರಿಸುವ ರಿಯಲ್ಲಿರುವ ಅಡ್ಡಿ ಆತಂಕಗಳನ್ನು ಮಾತ್ರ ಈ ಹದೀಸ್‌ನಲ್ಲಿ ಹೇಳಲಾಗಿದೆ. ಆದರೂ ರಿಗೆ ಪ್ರಯೋಜನ ಒದಗಿಸಿ ಅವರ ಸಂಕಷ್ಟಗಳನ್ನು ನಿವಾರಿಸುವ ಎಲ್ಲ ಕರ್ಮಗಳೂ ಷ್ಠ ಮತ್ತು ಪುಣ್ಯದಾಯಕವೆಂಬ ಸೂಚನೆಯೂ ಈ ವಚನದ ಸಾರದಲ್ಲಿ ಸೇರಿದೆ ಂದು ಇಮಾಮ್ ನವವಿ ಅಭಿಪ್ರಾಯಪಟ್ಟಿದ್ದಾರೆ.

ಈ ಆದೇಶ ಮತ್ತು ಬೋಧನೆಗಳನ್ನು ಮುಸ್ಲಿಮ್ ಸಮುದಾಯವನ್ನು ಗಮನ ರಿಸಿ ನೀಡಲಾಗಿದೆಯೆಂಬುದು ಗಮನಾರ್ಹ. ಅದರಿಂದಾಗಿಯೇ ಪದೇಪದೇ ಸ್ಲಿಮರು ಸಂಚರಿಸುವ ಹಾದಿಯೆಂದು ಹೇಳಲಾಗಿದೆ. ಹಾಗಿದ್ದರೂ ಎಲ್ಲರಿಗೂ ಯವಾಗುವ ಸಾಮಾನ್ಯ ನಿಯಮವು ಈ ಆದೇಶಗಳಲ್ಲಿ ಒಳಗೊಂಡಿದೆ. ಜಾತಿ ಮತ ವವಿಲ್ಲದೆ ಎಲ್ಲ ಮಾನವರ ಸಂಚಾರ ಮಾರ್ಗದ ಅಡಚಣೆಗಳ ನಿವಾರಣೆಯೂ ್ಯ ಮತ್ತು ಪ್ರತಿಫಲಾರ್ಹ ಕರ್ಮವಾಗಿದೆ. ಮುಸ್ಲಿಮರು ಎಂಬ ಬದಲಿಗೆ ಜನರು

ಎಂದು ಇತರ ಕೆಲವು ಹದೀಸ್‌ಗಳಲ್ಲಿ ಉದ್ಧರಿಸಲಾಗಿದೆ. ಅಬೂ ಹುರೈರ(ರ)
ಮಾಡಿದ್ದಾರೆ. ದಾರಿಯಿಂದ ಅಡಚಣೆಗಳನ್ನು ನಿವಾರಿಸುವುದೂ ದಾನವಾಗಿದೆ.

(ಬುಖಾರಿ, ಮುಸ್ಲಿ

ಆಪತ್ಕಾಲದಲ್ಲಿ ಮಾನವರಿಗೆ ನೆರವಾಗಿ ಅವರ ಆವಶ್ಯಕತೆಗಳನ್ನು ಪೂರೈಸು
ದಾನಧರ್ಮಗಳ ಮೂಲ ಉದ್ದೇಶವಾಗಿದೆಯಷ್ಟೇ. ಸಂಚಾರದ ಹಾದಿಯಿಂದ ತೊ
ಗಳನ್ನು ನಿವಾರಿಸುವುದರ ಉದ್ದೇಶವೂ ಅದೇ ಆಗಿದೆ. ಆ ಮೂಲಕ ಯಾ
ಸಮಸ್ಯೆಗಳನ್ನು ಬಗೆಹರಿಸಿ ಪ್ರಯಾಣವನ್ನು ಸುಗಮ ಮತ್ತು ಸುರಕ್ಷಿತಗೊಳಿಸಲಾಗು
ಈ ಆಧಾರದಲ್ಲಿ ನೋಡಿದಾಗ ಅಂಥ ಸೇವೆಗಳೂ ಜನರಿಗೆ ಮಾಡುವ ಸಾಮು
ದಾನವಾಗುತ್ತದೆ.

ಆದ್ದರಿಂದ ಸಂಚಾರ ಪಥದಲ್ಲಿರುವ ಎಲ್ಲ ರೀತಿಯ ಅಡಚಣೆಗಳನ್ನು ನಿವ
ಪ್ರಯಾಣಕ್ಕೆ ಸೌಲಭ್ಯ ಒದಗಿಸುವುದು ಧಾರ್ಮಿಕ ಚಟುವಟಿಕೆಯ ಅಂಗವೆಂದು ಇಸ್ಲಾ
ಪರಿಗಣಿಸಿದೆ. ಮುಸ್ಲಿಮರಿಗೆ ಅದರಿಂದ ಉದಾತ್ತ ಮತ್ತು ಅನನ್ಯವಾದ ಪ್ರತಿಫಲ
ನಿರೀಕ್ಷಿಸಬಹುದು.

## ಛತ್ರ ಮತ್ತು ಹೋಟೇಲುಗಳು

ಜನರು ಸಂಚರಿಸುವ ಮಾರ್ಗದ ಬದಿಗಳಲ್ಲಿ ಹೋಟೇಲು ಮತ್ತು ಛತ್ರಗ
ನಿರ್ಮಿಸುವುದು ಜನಸೇವೆಯ ಭಾಗವಾಗಿದೆ. ಆ ಮೂಲಕ ಯಾತ್ರಿಕರಿಗೆ ಉ
ಸೌಲಭ್ಯಗಳು ದೊರೆತು ತಮ್ಮ ಊರುಗಳಿಂದ ದೂರವಿರುವುದರಿಂದಾಗುವ ತೊ
ಗಳನ್ನು ಒಂದು ಮಿತಿಯ ತನಕ ಕಡಿಮೆಗೊಳಿಸಬಹುದಾಗಿದೆ. ಅದರ ಪುಣ್ಯದ
ಅಬೂಹುರೈರಾ(ರ) ಹೀಗೆ ವಿವರಿಸಿದ್ದಾರೆ.

ವಿಶ್ವಾಸಿಯ ಮರಣದ ಬಳಿಕ ಆತನಿಗೆ ಶಾಶ್ವತವಾಗಿ ಪುಣ್ಯ ದೊರೆಯುವ ಕರ್ಮ
ಹೀಗಿವೆ. ತಾನು ಕಲಿತು ಪ್ರಚಾರಗೊಳಿಸುವ ವಿದ್ಯೆ, ಸದ್ಗುಣ ಸಂಪನ್ನ ಮಕ್ಕಳು,
ವಾರೀಸುದಾರರಿಗೆ ಬಿಟ್ಟು ಹೋಗುವ ಕುರ್‌ಆನ್ ಗ್ರಂಥ(ಮುಸ್‌ಹಫ್),
ನಿರ್ಮಿಸಿದ ಮಸೀದಿ ಅಥವಾ ಯಾತ್ರಿಕರ ಸೌಲಭ್ಯಕ್ಕಾಗಿ ನಿರ್ಮಿಸಿದ ಕಟ್ಟಡ ಅ
ತಾನು ತೋಡಿದ ಕಾಲುವೆ, ಆರೋಗ್ಯವಂತನಾಗಿದ್ದ ದಿನಗಳಲ್ಲಿ ತನ್ನ ಸಂಪ
ಯಿಂದ ನೀಡಿದ ದಾನ ಇತ್ಯಾದಿಗಳ ಪ್ರತಿಫಲವು ಮರಣದ ಬಳಿಕವೂ ಆ
ದೊರೆಯುತ್ತಲಿರುತ್ತದೆ. (ಇಬ್ನುಮ

ಈ ವಚನದಲ್ಲಿ ಶಾಶ್ವತ ದಾನವೆಂದು ಸಾರಿರುವ ಕೆಲವು ಜನೋಪಯೆ
ಸೇವೆಗಳಲ್ಲಿ ಪ್ರಯಾಣಿಕರ ಅನುಕೂಲಕ್ಕಾಗಿ ಕಟ್ಟಡ ಮತ್ತು ಛತ್ರಗಳ ನಿರ್ಮಾ
ಸೇರಿದೆ. ಇಂಥ ಸೇವಾ ಚಟುವಟಿಕೆಗಳಲ್ಲಿ ಹಣ ವ್ಯಯವು ಉದಾತ್ತ ದಾನವೆ
ಇನ್ನೊಂದು ಹದೀಸ್‌ನಲ್ಲಿ ಸ್ಪಷ್ಟಪಡಿಸಲಾಗಿದೆ. ಹ. ಅಬೂ ಉಮಾಮರಿಂದ ವ
ಅಲ್ಲಾಹನ ಹಾದಿಯಲ್ಲಿ ಡೇರೆಯ ನೆರಳು ಲಭ್ಯಗೊಳಿಸುವುದು ದಾನ ಧರ್ಮಗ
ಅತ್ಯಂತ ಶ್ರೇಷ್ಠವಾಗಿದೆ. (ತಿಮಿ

ಈ ಹದೀಸ್‌ನಲ್ಲಿ ಮೇಲ್ನೋಟಕ್ಕೆ ಧರ್ಮ ಯೋಧರಿಗೆ ಡೇರೆ, ಬಿಡಾರಗಳನ್ನು
ಿಸುವುದರ ಪುಣ್ಯವನ್ನು ವಿವರಿಸಲಾಗಿದೆ. ಆದರೆ ವಿದ್ಯೆ, ತರಬೇತಿ, ಸಂದೇಶಪ್ರಚಾರ,
ಜ್, ಉಮ್ರಾದಂಥ ಧಾರ್ಮಿಕ ಉದ್ದೇಶಗಳಿಗಾಗಿ ಕೇಂದ್ರಗಳು ಮತ್ತು ಕಟ್ಟಡಗಳ
ರ್ಮಾಣವು ಅದರ ವ್ಯಾಪ್ತಿಯಲ್ಲಿ ಸೇರುವುದೆಂಬುದರಲ್ಲಿ ಸಂದೇಹವಿಲ್ಲ.

## ದ್ಧ ನೀರಿನ ವ್ಯವಸ್ಥೆ

ನೀರು, ಜೀವನದ ಮೂಲಭೂತ ಬೇಡಿಕೆಯಾಗಿದೆ. ಮುಂದುವರಿದ ಇಂದಿನ
ವಲ್ಲಿಯೂ ಶುದ್ಧ ನೀರಿನ ಶೇಖರಣೆ ಮತ್ತು ಅಗತ್ಯಾನುಸಾರ ಅದರ ಲಭ್ಯತೆಯು
ದೊಡ್ಡ ಸಮಸ್ಯೆಯಾಗಿದೆ. ಇಸ್ಲಾಮ್ ಅದಕ್ಕೆ ಎಷ್ಟೊಂದು ಪ್ರಾಮುಖ್ಯತೆ ಮತ್ತು
ತ್ವ ನೀಡಿದೆಯೆಂಬುದು ಕಾಲುವೆ ತೋಡುವುದಕ್ಕೆ ಶಾಶ್ವತ ಪುಣ್ಯವಿದೆಯೆಂಬ ಮೇಲಿನ
ೀಸ್‌ನಿಂದ ತಿಳಿಯಬಹುದು.

ಹ. ಸಅದ್ ಬಿನ್ ಉಬಾದ, ಮರಣ ಹೊಂದಿದ ತನ್ನ ತಾಯಿಯ ಹೆಸರಲ್ಲಿ
ಧರ್ಮ ಮಾಡಬಯಸಿ, ಅತ್ಯುತ್ತಮ ದಾನದ ಬಗ್ಗೆ ಪ್ರವಾದಿಯವರೊಡನೆ(ಸ)
ರಿಸಿದಾಗ ತಾಯಿಯ ಹೆಸರಲ್ಲಿ ಬಾವಿ ತೋಡಿಸುವಂತೆ ಅವರು ತಿಳಿಸಿದರು.
ಗೆಯೇ ಅವರು ತಾಯಿಯ ಹೆಸರಲ್ಲಿ ಬಾವಿ ತೋಡಿಸಿದರು. (ಅಬೂದಾವೂದ್)

ಶುದ್ಧ ನೀರಿನ ಸಂಗ್ರಹ ಮತ್ತು ವಿತರಣೆಗಾಗಿ ಕೆರೆ ಬಾವಿಗಳನ್ನು ತೋಡಿಸುವುದು
ಿನ ಕಾಲದಿಂದಲೇ ರೂಢಿಯಾಗಿದೆ. ಕೊಳವೆ ಬಾವಿಗಳನ್ನು ತೋಡಿಸುವುದು,
ಂಕುಗಳಲ್ಲಿ ನೀರು ಸಂಗ್ರಹಿಸಿ ವಿತರಣೆ ಮಾಡುವುದು, ಕೊಳವೆಗಳ ಮೂಲಕ ಶುದ್ಧ
ು ವಿತರಿಸುವ ಎಲ್ಲ ಯೋಜನೆಗಳೂ ಶಾಶ್ವತ ದಾನವಾಗಿ ಮಾರ್ಪಡುವ ಜನೋಪಯೋಗಿ
ಗಳೆಂದು ಇಸ್ಲಾಮ್ ಪರಿಗಣಿಸಿದೆ.

## ೂನನ್ನು ಜನವಾಸಕ್ಕೆ ಯೋಗ್ಯಗೊಳಿಸುವುದು

ಬರಡು ಜಮೀನನ್ನು ಕೃಷಿ ಯೋಗ್ಯಗೊಳಿಸಲಿಕ್ಕಾಗಿ ಅಗತ್ಯವಿರುವ ನೆರವು ನೀಡುವುದು
ಕಲ್ಯಾಣದ ಪ್ರಧಾನ ಸೇವೆಯಾಗಿದೆ. ಅದರಿಂದ ಸಾರ್ವಜನಿಕವಾಗಿ ಇಡೀ ಸಮಾಜಕ್ಕೂ
ತ್ತಕ್ಕೂ ಬಹಳಷ್ಟು ಲಾಭವಿದೆ.

ಜನವಾಸವಿಲ್ಲದ ಜಮೀನಿನಲ್ಲಿ ಜನವಾಸ ಏರ್ಪಡಿಸಿ ಅದರಿಂದ ದೊರೆಯುವ
ಯವನ್ನು ಜನರ ಕ್ಷೇಮಾಭಿವೃದ್ಧಿಗಾಗಿ ಸರಕಾರಿ ಮಟ್ಟದಲ್ಲಿ ಯೋಜನೆಗಳನ್ನು
ಳ್ಳ ಬಹುದಾಗಿದೆ. ಹಾಗೆಯೇ ನಿವಾಸ ಬಯಸುವ ಜನರನ್ನು ಅದಕ್ಕೆ ಅನುಮತಿಸಿ
ಕ್ಕೆ ಅಗತ್ಯವಿರುವ ಸೌಲಭ್ಯಗಳನ್ನು ಒದಗಿಸಿ ಸರಕಾರವು ಪರೋಕ್ಷವಾಗಿ ಜನ
ವನ್ನು ಪ್ರೋತ್ಸಾಹಿಸಬಹುದು. ಬರಡು ಭೂಮಿಗಳನ್ನು ಜನವಾಸಕ್ಕೆ ಯೋಗ್ಯ
ಿಸಲಿಕ್ಕಾಗಿ ಬಹಳಷ್ಟು ಪ್ರೋತ್ಸಾಹಿಸುವುದನ್ನು ಇಸ್ಲಾಮ್ ಪುಣ್ಯ ಕರ್ಮವೆಂದು ಸಾರಿದೆ.
ಜಾಬಿರ್‌ರಿಂದ(ರ) ವರದಿಯಾಗಿದೆ: ಪ್ರವಾದಿ(ಸ) ಹೇಳಿದರು. "ಮೃತ ಭೂಮಿಯನ್ನು

ಜೀವಂತಗೊಳಿಸುವವರಿಗೆ ಅದರ ಪ್ರತಿಫಲವಿದೆ. ಆವಶ್ಯಕತೆಯಿರುವ ಸೃಷ್ಟಿ ಜಾಲ (ಮಾನವ, ಪ್ರಾಣಿ, ಪಕ್ಷಿ ಇತ್ಯಾದಿ) ಅದರಿಂದ ಏನನ್ನು ತಿಂದರೂ ಅದು ಅ ಕಡೆಯಿಂದ ದಾನವಾಗಿದೆ. (ಅಹ್ಮ

ಪಾಳು ಬಿದ್ದ ಜಮೀನನ್ನು ಸ್ವಂತ ದುಡಿಮೆಯಿಂದ ಫಲ ಸಮೃದ್ಧಗೊಳಿ ಅದರ ಪ್ರಯೋಜನವು ಮೂಲಭೂತವಾಗಿ ಅದನ್ನು ನಿರ್ವಹಿಸಿದವರಿಗೂ ಕುಟುಂಬಕ್ಕೂ ದೊರೆಯುತ್ತದೆ. ಆದರೆ ಪ್ರಸ್ತುತ ದುಡಿಮೆಯು ಯಾವುದಾದರೂ ಹಿ ಗುರಿಯನ್ನು ಹೊಂದಿದ್ದರೆ ಅದು ಪ್ರತಿಫಲಾರ್ಹವಾಗಿದೆ. ಅವುಗಳಿಂದ ಅಲ್ಲಾ ಯಾವುದೇ ಸೃಷ್ಟಿಗಳು ಪ್ರಯೋಜನ ಪಡೆದರೆ ಅವೆಲ್ಲವೂ ದಾನವೆಂದು ಮ ಪ್ರವಾದಿ ವಚನ ಸೂಚಿಸುತ್ತದೆ. ಈ ದುಡಿಮೆಯ ಉದ್ದೇಶವು ಇಡೀ ಸಮೂ ಪ್ರಯೋಜನ ದೊರೆಯಬೇಕೆಂಬುದಾಗಿದ್ದರೆ ಅದರ ಪ್ರತಿಫಲವು ಎಷ್ಟೊಂದು ಅ ವಾಗಿರಬಹುದೆಂದು ಊಹಿಸಬಹುದು.

ಪೌರರ ಹಿತರಕ್ಷಣೆಯ ಕಾಳಜಿಯಿರುವ ಈ ಕಾಲದ ಸರಕಾರಗಳೂ ಬ ಭೂಮಿಯನ್ನು ಕೃಷಿ ಯೋಗ್ಯಗೊಳಿಸಲಿಕ್ಕಾಗಿ ಬದಲಾಯಿಸುವುದಕ್ಕೆ ಅಗತ್ಯವಿರುವ ಸೌ ಗಳನ್ನು ಒದಗಿಸುತ್ತದೆ. ಆದರೆ ಇಸ್ಲಾಮ್ ಒಂದು ಹೆಜ್ಜೆ ಮುಂದಿರಿಸಿ, ಬ ಭೂಮಿಯಲ್ಲಿ ಕೃಷಿ ಮಾಡುವಾತನಿಗೆ ಅದರ ಒಡೆತನ ಹಕ್ಕನ್ನೂ ನೀಡಿದೆ. ಹ. ಜಾಬಿರ ವರದಿ ಮಾಡಿದ್ದಾರೆ: ಪ್ರವಾದಿ(ಸ) ಹೇಳಿದರು. "ಓರ್ವನು ಮೃತ ಭೂಮಿ ಜೀವಂತಗೊಳಿಸಿದರೆ ಅದು ಅವನಿಗೆ ಸೇರುವುದು." (ತಿರ್ಮಿದಿ) ಇದನ್ನೇ ಉಮರ ಕೂಡಾ ಹೇಳಿದ್ದಾರೆ. (ತಿಮಿ

ವ್ಯಕ್ತಿಯ ಹಕ್ಕುಗಳು ಮತ್ತು ಸಮಾಜದ ಹಿತಾಸಕ್ತಿಗಳಿಗೆ ಹಾನಿಯಾಗದಿರಲಿ ಕೆಲವು ನಿರ್ದೇಶಗಳನ್ನು ನೀಡಲಾಗಿದೆ.

1) ಓರ್ವನ ಕೈವಶದಲ್ಲಿರುವ ಭೂಮಿಯು ಪಾಳು ಬಿದ್ದಿದೆಯೆಂದು ಘೊ ಸ್ವಾಧೀನಪಡಿಸಬಾರದೆಂಬುದು ಆ ನಿರ್ದೇಶಗಳಲ್ಲಿ ಅತಿ ಪ್ರಧಾನವಾಗಿದೆ. ಆಯಿಶಾ ವರದಿ: ಪ್ರವಾದಿಯವರು(ಸ) ಹೇಳಿದರು, "ಇತರರ ಒಡೆತನದಲ್ಲಿಲ್ಲದ ಜಮೀನನ್ನು ವಾಸಯೋಗ್ಯಗೊಳಿಸಿದರೆ ಆತನೇ ಅದರ ಅತಿದೊಡ್ಡ ಹಕ್ಕುದಾರನಾಗುವನು."

(ಬುಖ

ಅನ್ಯರ ಅಧೀನವಿಲ್ಲದ ಬರಡು ಭೂಮಿಯನ್ನು ಜೀವಂತಗೊಳಿಸಿದರೆ ಮಾತ್ರ ಹಕ್ಕು ಸ್ಥಾಪನೆಯಾಗುವುದೆಂದು ಈ ಪ್ರವಾದಿ ವಚನ ಸ್ಪಷ್ಟಪಡಿಸಿದೆ. ಸಈದ್ ಝೈದ್‌ರ ಇನ್ನೊಂದು ಹದೀಸ್‌ನಲ್ಲಿ ಅದನ್ನು ಮತ್ತಷ್ಟು ಸ್ಪಷ್ಟಪಡಿಸಲಾಗಿದೆ. ಓವ ಮೃತ ಭೂಮಿಯನ್ನು ಜೀವಂತಗೊಳಿಸಿದರೆ ಅದು ಅವನಿಗೆ ಸೇರುತ್ತದೆ. ಆದರೆ ಅ ಯಾಗಿರುವ ಬೇರಿಗೆ (ಅಕ್ರಮವಾಗಿ ಮಾಡುವ ಕೃಷಿ) ಯಾವುದೇ ಹಕ್ಕಿಲ್ಲ."

(ಅಬೂದಾವೂ

ಜನವಾಸವಿಲ್ಲದ ಭೂಮಿಯಲ್ಲಿ ಕೃಷಿ ಮಾಡುವಾತನಿಗೆ ಅದರ ಒಡೆತನ ಹಕ್ಕು ರೆಯುವುದಿದ್ದರೂ ಅದರ ತೆರೆಮರೆಯಲ್ಲಿ ಇತರರ ಜಮೀನನ್ನು ಆಕ್ರಮಿಸಬಾರದು. ಬೇಸಾಯ ಮಾಡುವುದು ಅಕ್ರಮವಾಗಿರುವುದರಿಂದ ಅದು ಧರ್ಮಸಮ್ಮತವಲ್ಲ ದು ಹದೀಸ್ ಕಲಿಸುತ್ತದೆ.

ಒಬ್ಬನು ಮತ್ತೊಬ್ಬನ ಜಮೀನಿನಲ್ಲಿ ಖರ್ಜೂರದ ಕೃಷಿ ಮಾಡಿದ ಪ್ರಕರಣವು ಾದಿಯವರ(ಸ) ಸನ್ನಿಧಿಗೆ ತಲುಪಿತು. ಆ ಜಮೀನು ಅದರ ನೈಜ ಒಡೆಯನದ್ದೆಂದು ರ್ಪ ನೀಡಿ ಅಲ್ಲಿದ್ದ ಖರ್ಜೂರದ ಮರಗಳನ್ನು ಕಡಿದು ಹಾಕುವಂತೆ ಪ್ರವಾದಿ ನರು(ಸ) ಆಜ್ಞಾಪಿಸಿದರು. (ಅಬೂದಾವೂದ್)

ಮಾಲಿಕನ ಬಗ್ಗೆ ಪತ್ತೆಯಿಲ್ಲದ ಬರಡು ಭೂಮಿಯಲ್ಲಿ ಬೇಸಾಯ ಮಾಡಿದರೆ ಂತರ ಮಾಲಿಕನ ಬಗ್ಗೆ ಮಾಹಿತಿ ದೊರೆತ ಕೂಡಲೇ ಅದನ್ನು ಹಿಂತಿರುಗಿಸಬೇಕು. ಗಿರುವ ನಷ್ಟವನ್ನು ಬೇಸಾಯಗಾರ ಬಗೆಹರಿಸಬೇಕೆಂದು ಮೇಲಿನ ಹದೀಸ್‌ನ ಲೆಯಲ್ಲಿ ಕರ್ಮಶಾಸ್ತ್ರಜ್ಞರು ಅಭಿಪ್ರಾಯಪಟ್ಟಿದ್ದಾರೆ.

2. ಹನಫಿ ಕರ್ಮಶಾಸ್ತ್ರ ಪ್ರಕಾರ, ಜನವಾಸ ಪ್ರದೇಶದ ಹತ್ತಿರವಿರುವ ಮತ್ತು ರ್ಜನಿಕರ ಅನೇಕಾರು ಬೇಡಿಕೆಗಳಿಗೆ ಸಂಬಂಧಪಟ್ಟ ಭೂಮಿಯ ಮಟ್ಟಿಗೆ ಜನವಾಸದ ನಿಯಮ ಅನ್ವಯವಾಗುವುದಿಲ್ಲ. ಇಮಾಮ್ ಶಾಫಿಈ ಮತ್ತು ಇಮಾಮ್ ಅಹ್ಮದ್‌ರ ಪ್ರಾಯದಲ್ಲಿ ನಿರ್ಜನ ಪ್ರದೇಶದಲ್ಲಿ ಬೇಸಾಯ ಮಾಡುವುದಕ್ಕೆ ಇಸ್ಲಾಮೀ ಳಿತಗಾರರ ಅಥವಾ ಇಮಾಮರ ಒಪ್ಪಿಗೆಯ ಅಗತ್ಯವಿಲ್ಲ. ಯಾರು ಅದನ್ನು ಾಯ ಯೋಗ್ಯ ಮಾಡುತ್ತಾನೋ ಅವನ ಹಕ್ಕನ್ನು ಅಂಗೀಕರಿಸಲಾಗುವುದು. ಆದರೆ ಾಮ್ ಅಬೂ ಹನೀಫರು ಅನುಮತಿಯ ಅಗತ್ಯವಿದೆಯೆಂದು ಅಭಿಪ್ರಾಯಪಟ್ಟಿದ್ದಾರೆ. ಾಮ್ ಮಾಲಿಕ್ ಅಭಿಪ್ರಾಯದಂತೆ ಪ್ರಸ್ತುತ ಜಮೀನು ಜನವಾಸ ಪ್ರದೇಶದ ರದಲ್ಲಿದ್ದರೆ ಅನುಮತಿ ಬೇಕು. ದೂರದಲ್ಲಿದ್ದರೆ ಬೇಕಾಗಿಲ್ಲ. ಓರ್ವನ ಸುಪರ್ದಿಗೆ ಲಾದ ಜಮೀನಿನಲ್ಲಿ ಅವರು ಮೂರು ವರ್ಷಗಳ ಕಾಲ ಕೃಷಿ ಮಾಡದಿದ್ದರೆ ಮೀ ಸರಕಾರವು ಆ ಜಮೀನನ್ನು ಆತನಿಂದ ಮರಳಿ ಪಡೆದು ಬೇರೆಯವರಿಗೆ ಬೇಕು. ಏಕೆಂದರೆ ಬೇಸಾಯ ಮಾಡಿ ಆ ಮೂಲಕ ಪ್ರತ್ಯಕ್ಷ ಅಥವಾ ಪರೋಕ್ಷವಾಗಿ ನವರಿಗೆ ಪ್ರಯೋಜನವಾಗಲಿಕ್ಕಾಗಿ ಆತನಿಗೆ ಜಮೀನು ನೀಡಲಾಗಿತ್ತು. ಕೇವಲ ಗಡಿ ಯಿಸಿದ ಕಾರಣದಿಂದ ಜನವಾಸಕ್ಕೆ ಯೋಗ್ಯಗೊಳಿಸಲಾಯಿತೆಂದು ಪರಿಗಣಿಸ ುವುದಿಲ್ಲ. ಈ ವಿಷಯದಲ್ಲಿ ಉಮರ್‌ರ ಒಂದು ಆಜ್ಞೆಯು ಬಹಳ ಪ್ರಧಾನವಾಗಿದೆ. ನು ಮೂರು ವರ್ಷಗಳ ಕಾಲ ಕೃಷಿ ಮಾಡದೆ ಖಾಲಿ ಬಿಟ್ಟಿದ್ದು, ಅಲ್ಲಿ ೊಬ್ಬನು ಕೃಷಿ ಮಾಡಿದರೆ ಆ ಜಮೀನು ಆತನ ವಶವಾಗುವುದೆಂದು ಉಮರ್ ಪಿಸಿದ್ದರು.

(ಫತ್ಹುಲ್ ಬಾರಿ)

ಜನವಾಸ ಯೋಗ್ಯಗೊಳಿಸುವುದೆಂಬುದರಲ್ಲಿ ಕೃಷಿ, ಬೇಸಾಯ ಮತ್ತು ಕಟ್ಟುವುದು ಸೇರಿದೆ. ಅವುಗಳ ಪ್ರಾಥಮಿಕ ಕಾಮಗಾರಿಯೂ ಅದರಲ್ಲಿ ಸೇರುವುದೆ ಹನಫಿ ಕರ್ಮಶಾಸ್ತ್ರಜ್ಞರು ಅಭಿಪ್ರಾಯಪಟ್ಟಿದ್ದಾರೆ. ಖಾಲಿ ಜಮೀನನ್ನು ಕೃಷಿ ಯೋ ಗೊಳಿಸುವ ಹಕ್ಕು ಮುಸ್ಲಿಮರಂತೆಯೇ ದಿಮ್ಮಿ(ಇಸ್ಲಾಮೀ ರಾಷ್ಟ್ರದ ಮುಸ್ಲಿಮೇ ಪ್ರಜೆ)ಗಳಿಗೂ ಇದೆ. ಜನವಾಸವಿಲ್ಲದ ಜಮೀನನ್ನು ಜನವಾಸ ಯೋಗ್ಯಗೊಳಿಸುವ ಸಂಬಂಧಿಸಿದ ಇಸ್ಲಾಮೀ ಕಾನೂನುಗಳು ಬಹಳ ವಿಶಾಲವಾಗಿದೆ. ಇಲ್ಲಿ ಆದರೂ ಕೆ ಅಂಶಗಳನ್ನಷ್ಟೇ ಬೆಟ್ಟು ಮಾಡಲಾಗಿದೆ.

## ಮರ ನೆಡುವುದು

ಆಹಾರ ಮತ್ತು ಆರೋಗ್ಯದ ದೃಷ್ಟಿಯಿಂದ ಮರಗಳ ಮಹತ್ವವು ಸ್ಪಷ್ಟವಿದೆ. ಮತ್ತು ಶುದ್ಧ ಗಾಳಿಗೆ, ವಾತಾವರಣದ ತೇವಾಂಶ ರಕ್ಷಣೆಗೆ, ಜೀವ ಜಾಲಗಳಿಗೆ ನ ನೀಡುವುದಕ್ಕೆ ಮರಗಳು ಅನಿವಾರ್ಯವಾಗಿವೆ. ಅನೇಕ ಮರಗಳ ಹೂ, ಎಲೆ, ಇತ್ಯಾದಿ ಜಾನುವಾರುಗಳಿಗೂ ಮಾನವರಿಗೂ ಆಹಾರವಿದೆ ಮತ್ತು ರೋಗಗಳಿಗೆ ಚಿಕಿತ್ಸೆಯಿದೆ. ಬಾಳುವ ಆಹಾರ ಯೋಗ್ಯ ಮತ್ತು ರುಚಿಕರ ಹಣ್ಣುಗಳನ್ನು ನೀಡುವ ಮರ ಭೂಮಿಯಲ್ಲಿ ಧಾರಾಳವಾಗಿದೆ. ಅವುಗಳ ಕಾಂಡಗಳು ನಿರ್ಮಾಣ ಕಾಮಗಾರಿಗೆ ಸೌದೆಗೂ ಇನ್ನಿತರ ಕಾರ್ಯಗಳಿಗೂ ಉಪಯೋಗವಾಗುತ್ತದೆ.

ಪರ್ವತಗಳ ಪ್ರಯೋಜನ ಮತ್ತು ಉಪಕಾರ ಎಲ್ಲರಿಗೂ ತಿಳಿದಿದೆ. ಅದ ಸಮಯಕ್ಕೆ ಸರಿಯಾಗಿ ಮಳೆಯಾಗುತ್ತದೆ. ಹವಾಮಾನದಲ್ಲಿ ಅನುಕೂಲ ಮತ್ತು ಸ ದಾಯಕ ಬದಲಾವಣೆಯುಂಟಾಗುತ್ತದೆ. ಮಾಲಿನ್ಯ ನಿರ್ಮೂಲನಗೊಳ್ಳುತ್ತದೆ. ನೆರೆ ತಡೆಗಟ್ಟುತ್ತದೆ.

ಮರಗಳನ್ನು ನೆಡುವುದು ಮತ್ತು ತೋಟಗಳ ನಿರ್ಮಾಣವು ಭೂಮಿಯನ್ನು ಜನ ಗೊಳಿಸುವ ಕಾರ್ಯಗಳಲ್ಲಿ ಸೇರಿದೆ. ಹದೀಸ್‌ಗಳಲ್ಲಿ ಅವುಗಳನ್ನು ವಿಶೇಷವಾಗಿ ಪರಿ ಅವುಗಳತ್ತ ಜನರ ಗಮನ ಸೆಳೆಯಲಾಗಿದೆ. ಅದರಿಂದ ಅದರ ಮಹತ್ವವು ವಾಗುತ್ತದೆ. ಅನಸ್ ವರದಿ ಮಾಡಿದ ಪ್ರವಾದಿ ವಚನದಲ್ಲಿ ಹೀಗಿದೆ.

ಒಬ್ಬ ಮುಸ್ಲಿಮನು ನೆಟ್ಟು ಬೆಳೆಸಿದ ಗಿಡದಿಂದ ಅಥವಾ ಬಿತ್ತಿದ ಬೆಳೆಯಿಂದ ಪಕ್ಷಿಗಳು ಅಥವಾ ಮಾನವರು ತಿಂದರೆ ಅದು ಆತನಿಗೆ ದಾನವಾಗುವುದು.

(ಬುಖ

ಇನ್ನೊಂದು ಹದೀಸ್ ಜಾಬಿರ್‌ರಿಂದ ವರದಿಯಾಗಿದೆ. "ಮುಸ್ಲಿಮನು ಬೆಳೆಸಿದ ಗಿಡಮರಗಳಿಂದ ತಿನ್ನಲಾಗುವುದೆಲ್ಲವೂ ಆತನ ವತಿಯಿಂದ ದಾನವಾಗಿದೆ. ಕ್ರೂರಮೃಗಗಳು ತಿಂದರೂ ಪಕ್ಷಿಗಳು ತಿಂದರೂ ದಾನವಾಗಿದೆ. ಅದರಿಂದ ಕದಿಯಲ ಅದೂ ದಾನವಾಗಿದೆ. ಯಾರಾದರೂ ಅದರಿಂದ ಏನನ್ನಾದರೂ ಕೊಂಡೊಯ್ದರೂ ದಾನವಾಗಿದೆ."

(ಮುಸ್ಲಿ

ಈ ಹದೀಸ್‌ಗಳು ಮರಗಳನ್ನು ನೆಟ್ಟು ಬೆಳೆಸುವುದರ ಪುಣ್ಯವನ್ನು ವಿವರಿಸುವ ಜತೆಗೆ ಮಿಯನ್ನು ಜನವಾಸ ಯೋಗ್ಯಗೊಳಿಸಲು ಪ್ರೋತ್ಸಾಹವೂ ಇದೆಯೆಂದು ಇಬ್ನು ್ ಅಭಿಪ್ರಾಯ ಪಟ್ಟಿದ್ದಾರೆ.

ತರುವಾಯ ಅವರು ಹೇಳುತ್ತಾರೆ- ಇದರಿಂದ ಫಲವತ್ತಾದ ಭೂಮಿಯನ್ನಿರಿಸುವುದು ್ತ ಅದರಲ್ಲಿ ವಾಸವಾಗುವುದಕ್ಕೆ ಆಧಾರವೂ ಸಿಗುತ್ತದೆ. ಇದರಿಂದ ಈ ಕೆಲಸಗಳನ್ನು ಪಡದ ಕಪಟ ದೇವಭಕ್ತರ ವಿಚಾರದ ಖಂಡನೆಯೂ ಆಗುತ್ತದೆ.

ಹ. ಮುಆದ್ ಬಿನ್ ಜಬಲ್ ಉದ್ಧರಿಸಿದ್ದಾರೆ. ಪ್ರವಾದಿಯವರು(ಸ) ಹೇಳಿದರು, ರಾದರೂ ಅತಿಕ್ರಮವೆಸಗದೆ ಕಟ್ಟಡಗಳನ್ನು ಕಟ್ಟಿದರೆ ಅಥವಾ ಗಿಡಮರಗಳನ್ನು ರೆ ಅದು ಶಾಶ್ವತವಾಗಿ ಉಳಿಯುವ ದಾನವಾಗುತ್ತದೆ. ಅಲ್ಲಾಹನ ಸೃಷ್ಟಿಗಳು ಗಳಿಂದ ಪ್ರಯೋಜನ ಪಡೆಯುತ್ತಿರುವ ತನಕ."

(ಮುಸ್ನದ್ ಅಹ್ಮದ್)

ಮರಗಳನ್ನು ನೆಡುವುದು ಮತ್ತು ಹೂದೋಟಗಳನ್ನು ನಿರ್ಮಿಸುವುದು ಇತ್ಯಾದಿ ಗಳನ್ನು ತನ್ನ ಸ್ವಂತ ಪ್ರಯೋಜನಕ್ಕಾಗಿದ್ದರೂ ಅಲ್ಲಾಹನ ಬಳಿ ಪ್ರತಿಫಲಾರ್ಹ ದೆ. ಹೀಗಿರುತ್ತಾ ಅದು ಸಮಾಜದ ಉಪಕಾರಕ್ಕಾಗಿದ್ದರೆ ಅದರ ಪ್ರತಿಫಲವು ಅಷ್ಟೇ ್ಗಿರುವುದು ಅದು ಶಾಶ್ವತವಾಗಿ ಉಳಿಯುವ ದಾನವಾಗಿದೆ. ಅಂದರೆ ಅವನ ಣದ ನಂತರವೂ ಅವನಿಗೆ ಅದರಿಂದ ಪ್ರತಿಫಲ ಸಿಗುತ್ತಲಿರುವುದು. ಹಿಂದೆ ವಿವರಿಸಿದ ು ಹದೀಸ್‌ನಲ್ಲಿ 'ಅಂತ್ಯದ ದಿವಸ ವರೆಗೂ' ಎಂಬ ಪದಗಳು ಬಂದಿದ್ದು ಅಂತ್ಯ ು ವರೆಗೂ ಅದರ ಪುಣ್ಯ ತಲುಪುತ್ತಾ ಇರುವುದೆಂದರ್ಥ. ಒಂದು ಮರ ನೆಟ್ಟರೆ ಂದ ಇನ್ನೂ ಅನೇಕ ಮರಗಳು ಹುಟ್ಟುತ್ತವೆ. ಅದೇ ರೀತಿ ಯಾವುದೇ ವಸ್ತುವನ್ನು ಬಿತ್ತಿದರೂ ಅದರಿಂದ ಇನ್ನಷ್ಟು ಬೆಳೆಗಳುಂಟಾಗುತ್ತವೆ. ಇದು ಉಳಿದಿರುವ ಅದರ ಫಲವೂ ಸಿಗುವುದು. ಏಕೆಂದರೆ ದೇವ ಸೃಷ್ಟಿಗಳು ಅದರಿಂದ ಪ್ರಯೋಜನ ಯುತ್ತವೆ. ಇದು ಅಂತ್ಯ ದಿನದ ವರೆಗೆ ಜಾರಿಯಲ್ಲಿರುವುದು. ಡೆಮಾಸ್ಕಸ್‌ನಲ್ಲಿ ಗಿಡ ತ್ತಿದ್ದ ಅಬೂದರ್ದಾರನ್ನು ಕಂಡಾಗ ಓರ್ವ ವ್ಯಕ್ತಿಯು ಪ್ರವಾದಿಯ ಶಿಷ್ಯನು ಲೌಕಿಕ ಹಾರಗಳಲ್ಲಿ ನಿರತನಾಗುವುದೇ ಎಂದು ಅಚ್ಚರಿಯಿಂದ ಕೇಳಿದರು. ಆಗ ಅಬೂದರ್ದಾ ಉತ್ತರಿಸಿದರು. ಆಕ್ಷೇಪಿಸಲು ಅವಸರ ಪಡಬೇಡಿ, ನಾನು ಈಗ ಒಂದು ಪುಣ್ಯ ದಲ್ಲಿ ನಿರತನಾಗಿದ್ದೇನೆ. ಏಕೆಂದರೆ, ಯಾರಾದರೂ ಮರವನ್ನು ನೆಟ್ಟು ಬೆಳೆಸಿ, ರವರು ಹಾಗೂ ಇತರ ಜೀವ ಜಾಲಗಳು ಅದರಿಂದ ಏನಾದರೂ ತಿಂದರೆ ಅದು ವೆಂದು ಪ್ರವಾದಿಯವರು(ಸ) ಕಲಿಸಿದ್ದಾರೆ. (ಮುಸ್ನದ್ ಅಹ್ಮದ್) ದಾರಿ ಬದಿಯಲ್ಲಿ ನ ಮರಗಳನ್ನು ನೆಡುವುದು, ಜನರ ಮನೋರಂಜನೆಗಾಗಿ ಸಾರ್ವಜನಿಕ ಸ್ಥಳಗಳಲ್ಲಿ ನೋಟ ಬೆಳೆಸುವುದು, ಕಾಡುಗಳನ್ನು ಸಂರಕ್ಷಿಸುವುದು ಇತ್ಯಾದಿಗಳೆಲ್ಲವೂ ಜನಸೇವೆಯ ವೇ ಆಗಿದೆ. ಆದ್ದರಿಂದಲೇ ಪ್ರತಿಫಲಾರ್ಹವೆಂದು ಈ ಎಲ್ಲ ವಚನಗಳು ಕಲಿಸುತ್ತವೆ.

## ಮಸೀದಿ ನಿರ್ಮಾಣ

ಮಸೀದಿಗಳು ಅಲ್ಲಾಹನ ಆರಾಧನಾ ಕೇಂದ್ರಗಳಾಗಿವೆ. ಆದ್ದರಿಂದ ಮ
ನಿರ್ಮಾಣವು ಅಲ್ಲಾಹನ ಆರಾಧನೆಗೆ ನೇರವಾಗಿ ನೆರವಾಗುವ ಸೇವೆಯಾಗಿದೆ. ಇಸ್ಲಾ
ಆರಂಭ ಕಾಲದಲ್ಲಿ ಮಸೀದಿಗಳು ಆರಾಧನೆಗೆ ಮಾತ್ರವಲ್ಲದೇ ಮುಸ್ಲಿಮರಿಗೆ ಸಂಬಂಧಿ
ರಾಜಕೀಯ, ಆರ್ಥಿಕ ಮತ್ತು ಸಾಮಾಜಿಕವಾದ ಎಲ್ಲ ವಿಷಯಗಳಲ್ಲಿಯೂ ಚರ್ಚಿ
ಸಾಂಸ್ಕೃತಿಕ ಕೇಂದ್ರಗಳೂ ಆಗಿದ್ದವು. ಕಾಲಕ್ರಮೇಣ ಅವುಗಳಲ್ಲಿ ಬಹಳಷ್ಟು ಬದಲಾವಣೆ
ಸಂಭವಿಸಿದರೂ ಮುಸ್ಲಿಮರ ಸಾಮಾಜಿಕ ಜೀವನದ ಕೇಂದ್ರವೆಂಬ ಸ್ಥಾನವು ಮಸೀದಿ
ಈಗಲೂ ಇದೆ. ಆದ್ದರಿಂದ ಮಸೀದಿ ನಿರ್ಮಾಣವನ್ನು ಇಸ್ಲಾಮ್ ಜನಸೇ
ಭಾಗವೆಂದು ಪರಿಗಣಿಸಿ ಅದಕ್ಕೆ ಹೆಚ್ಚಿನ ಪ್ರೋತ್ಸಾಹ ನೀಡಲಾಗಿದೆ. ಮ
ನಿರ್ಮಾಣದಲ್ಲಿರುವ ಪುಣ್ಯ ಕುರಿತು ಪ್ರವಾದಿಯವರು(ಸ) ಹೀಗೆ ಹೇಳಿರುವುದಾಗಿ ಉಸ್ಮಾ
ರವರು ವರದಿ ಮಾಡಿದ್ದಾರೆ. "ಓರ್ವನು ಅಲ್ಲಾಹನ ಸಂಪ್ರೀತಿಯನ್ನು ಬಯಸಿ ಮ
ನಿರ್ಮಿಸಿದರೆ ಆತನಿಗೆ ಸ್ವರ್ಗದಲ್ಲಿ ಅಂಥ ಒಂದನ್ನು ಅಲ್ಲಾಹನು ನಿರ್ಮಿಸಿಕೊಡುವ
(ಬುಖಾರಿ, ಮುಸ್ಲಿ

## ವಿದ್ಯಾಲಯಗಳು

ಜನತೆಯ ವೈಚಾರಿಕ ಮತ್ತು ಮಾನಸಿಕ ಬೆಳವಣಿಗೆಯಲ್ಲಿ ವಿದ್ಯಾಲಯ
ಮಹತ್ವದ ಪಾತ್ರ ವಹಿಸುತ್ತವೆ. ಆದ್ದರಿಂದ ಜನಕಲ್ಯಾಣಕಾರಿ ಸೇವೆಯಲ್ಲಿ ವಿದ್ಯಾಭ್ಯಾ
ಬಹಳ ಪ್ರಾಮುಖ್ಯತೆಯಿದೆ. ಇಸ್ಲಾಮ್ ಅದರ ಮಹತ್ವವನ್ನು ಚೆನ್ನಾಗಿ ಅರಿತು ಅ
ಅಭಿವೃದ್ಧಿಗಾಗಿ ಅತ್ಯಧಿಕ ಪರಿಶ್ರಮಿಸಿದೆ. ವಿದ್ಯಾಭ್ಯಾಸದ ಪ್ರಚಾರ ಮತ್ತು ಪ್ರಸಾ
ಧಾರ್ಮಿಕ ಕರ್ತವ್ಯವೆಂಬುದು ಇಸ್ಲಾಮಿನ ಕಲ್ಪನೆಯಾಗಿದೆ. ತನಗೆ ತಿಳಿದಿರುವ ಜ್ಞಾನ
ಇತರರಿಗೂ ಹರಡಬೇಕೆಂದು ಇಸ್ಲಾಮ್ ಕಟ್ಟಾಜ್ಞೆ ನೀಡಿದೆ. ಈ ಕಾಲದಲ್ಲಿ ವಿದ್ಯಾ
ಮತ್ತು ಪಾಠಶಾಲೆಗಳು ಜ್ಞಾನವನ್ನು ಹರಡುವ ಉಪಯುಕ್ತ ಮಾರ್ಗವಾಗಿದೆ. ವಿಜ್ಞ
ಕಲೆ, ನಾಗರಿಕತೆ, ರಾಜಕೀಯ, ಆರ್ಥಿಕ ಇತ್ಯಾದಿ ಜೀವನದ ವಿಭಿನ್ನ ರಂಗ
ಚಲಾಯಿಸಲು ಸಮರ್ಥರಾದ ಪ್ರತಿಭೆಗಳನ್ನು ವಿದ್ಯಾಲಯಗಳೇ ತಯಾರಿಸುತ್ತವೆ. ಪ್ರ
ಯವರ ಕಾಲದಲ್ಲಿ ಇಂದಿನಂತೆ ವಿವಿಧ ವಿದ್ಯಾ ಶಾಲೆಗಳಿಗೆ ಪ್ರತ್ಯಪ್ರತ್ಯೇಕ ಸ
ಗಳಿರಲಿಲ್ಲ. ಬದಲಾಗಿ ಅಂದು ಮಸೀದಿಗಳಿಂದ ಜ್ಞಾನದ ಬೆಳದಿಂಗಳನ್ನು ನಾಲ್ದೆಸೆಗ
ಪಸರಿಸಲಾಗುತ್ತಿತ್ತು. ಶಿಕ್ಷಣ ತರಗತಿಗಳು, ಸಭೆಗಳು ಮತ್ತು ವಿದ್ಯಾದಾನದ ಕರ್ತವ್ಯಗ
ಈಡೇರಿಸಲಾಗುತ್ತಿತ್ತು.

ಕಾಲಕ್ರಮೇಣ ಧಾರ್ಮಿಕ ಶಿಕ್ಷಣದ ಜತೆಯಲ್ಲಿ, ಅದರ ಬೆಳಕಿನಲ್ಲಿ ಸಮಕಾ
ಚಿಂತನೆ ಮತ್ತು ದರ್ಶನಗಳನ್ನು ಗಹನವಾಗಿ ಕಲಿಯುವ ಸಂಸ್ಥೆಗಳನ್ನು ಮುಸ್ಲಿ
ಸ್ಥಾಪಿಸಿದರು. ಸಮಕಾಲೀನ ಸಮಾಜದ ಸಾಮಾನ್ಯ ಸೊತ್ತಾಗಿ ಮಾರ್ಪಟ್ಟ ವಿದ್ವಾಂಸರ
ಚಿಂತಕರನ್ನು ಅಂಥ ಸಂಸ್ಥೆಗಳು ಕೊಡುಗೆ ನೀಡಿದುವು.

## ತ್ರೆಗಳು

ಇಸ್ಲಾಮಿಗಿಂತ ಮುಂಚೆ ಅರಬರಲ್ಲಿ ರೋಗ ಚಿಕಿತ್ಸೆಯು ವೈಯಕ್ತಿಕ ಸಮಸ್ಯೆ ವಾ ಹೆಚ್ಚೆಂದರೆ ಕೇವಲ ಕೌಟುಂಬಿಕ ಸಮಸ್ಯೆಯಾಗಿತ್ತು. ಅಂದು ರೋಗಗಳಿಗೆ ಃ ಚಿಕಿತ್ಸೆ ನಡೆಸುವ ರೂಢಿಯಿತ್ತು. ಸಾರ್ವಜನಿಕ ಚಿಕಿತ್ಸಾಲಯ ಅಥವಾ ತ್ರೆಗಳಿರಲಿಲ್ಲ. ಇಸ್ಲಾಮಿನ ಆಗಮನದ ಬಳಿಕವೂ ಕೆಲಕಾಲ ಇದೇ ಸ್ಥಿತಿಯಿತ್ತು. ರೆ ಇಸ್ಲಾಮ್ ಮಾನವ ಮನದಲ್ಲಿ ಸೃಷ್ಟಿಸಿದ ಸೇವಾ ಮನೋಭಾವ ಕಾಲಕ್ರಮೇಣ ತ್ಸಾಲಯಗಳನ್ನು ಆರಂಭಿಸಲು ಮುಸ್ಲಿಮರಿಗೆ ಪ್ರೇರಣೆ ನೀಡಿತು. ರುಫೈದ ಎಂಬ ರಿನ ಓರ್ವ ಸಹಾಬಿ ಮಹಿಳೆಯು ಮಸ್ಜಿದುನ್ನಬವಿಯ ಸಮೀಪ ಡೇರೆ ಹೂಡಿ, ದ್ಧದ ಗಾಯಾಳುಗಳಿಗೆ ಉಚಿತ ಶುಶ್ರೂಷೆ ನೀಡಿದ ಉದ್ಧರಣೆಗಳಿವೆ. ಕಂದಕ ದ್ಧದಲ್ಲಿ ಗಾಯಗೊಂಡ ಹ. ಸಅದ್ ಬಿನ್ ಮುಆದ್‌ರನ್ನು ರುಫೈದರ ಶಿಬಿರದಲ್ಲಿ ಗಿಸಿ ಚಿಕಿತ್ಸೆ ನಡೆಸುವಂತೆ ಪ್ರವಾದಿಯವರು(ಸ) ಮುಆದ್‌ರ ಕುಟುಂಬಕ್ಕೆ ತಿಳಿಸಿದರು. ಬಿ ಮಹಿಳೆಯ ಈ ಸೇವೆಯು, ಇಂದು ತುರ್ತು ಸ್ಥಿತಿಯಲ್ಲಿ ಏರ್ಪಡಿಸುವ ಕಲ್ ಕ್ಯಾಂಪನ್ನು ಜ್ಞಾಪಿಸುತ್ತದೆ. ಆರೋಗ್ಯ ರಂಗವು ಉದಾತ್ತವಾದ ಸೇವಾ ತ್ರವೆಂಬ ತಿಳುವಳಿಕೆಯಿದ್ದುದರಿಂದ ಅನಂತರ ಕಾಲದ ಮುಸ್ಲಿಮರು ಚಿಕಿತ್ಸಾಲಯ ತ್ತು ಔಷಧಾಲಯಗಳ ಸ್ಥಾಪನೆಯಲ್ಲಿ ಪ್ರಮುಖ ಪಾತ್ರ ವಹಿಸಿದರು.

## ಕಲ್ಯಾಣ ಕಾರ್ಯಗಳಲ್ಲಿ ವಕ್ಫ್‌ನ ಮಹತ್ವ

ಸೊತ್ತುಗಳು ಮತ್ತು ಬೆಲೆ ಬಾಳುವ ಇತರ ಸಂಪನ್ಮೂಲಗಳನ್ನು ಜನಕಲ್ಯಾಣ ೀಜನೆಗಾಗಿ ವಕ್ಫ್ ಮಾಡುವುದನ್ನು ಇಸ್ಲಾಮ್ ಪ್ರೋತ್ಸಾಹಿಸಿದೆ. ಅದರ ಪುಣ್ಯವನ್ನು ಯ ಸ್ಪರ್ಶಿಯಾಗಿ ವಿವರಿಸಿದೆ. ವಕ್ಫ್ ಸಂಪ್ರದಾಯವು ಸೇವಾ ಚಟುವಟಿಕೆಗಳನ್ನು ಗೊಳಿಸುವ ಅತ್ಯಂತ ಸರಳ ಮಾರ್ಗವಷ್ಟೇ. ಇಸ್ಲಾಮ್ ವಕ್ಫನ್ನು ಚಿರಂತನ ದಾನವೆಂದು ಗಣಿಸಿದೆ. ಪ್ರವಾದಿಯವರು(ಸ) ಹೇಳಿದ್ದಾರೆ, "ಮಾನವನು ಮರಣ ಹೊಂದಿದರೆ ರು ವಿಷಯಗಳ ಹೊರತು ಇತರೆಲ್ಲವೂ ಆತನಿಂದ ಸಂಬಂಧ ಕಡಿದುಕೊಳ್ಳುತ್ತವೆ. ತವಾಗಿ ಉಳಿಯುವ ದಾನ, ಜನರಿಗೆ ಉಪಯುಕ್ತವಾದ ಶಿಕ್ಷಣ, ತನಗಾಗಿ ಪ್ರಾರ್ಥಿಸುವ ೀಲ ಮಕ್ಕಳು, ಇವು ಆ ಮೂರು ಕಾರ್ಯಗಳಾಗಿವೆ."

(ವರದಿ ಅಬೂಹುರೈರಾ- ಮುಸ್ಲಿಮ್)

ಇಲ್ಲಿ ಶಾಶ್ವತ ದಾನವೆಂದರೆ ವಕ್ಫ್ ಎಂದು ಇಮಾಮ್ ನವವಿ ವ್ಯಾಖ್ಯಾನಿಸಿದ್ದಾರೆ. ಂದ ವಕ್ಫ್ ಧರ್ಮಸಮ್ಮತ ಮತ್ತು ಭಾರಿ ಪ್ರತಿಫಲಾರ್ಹವೆಂಬುದಕ್ಕೆ ಪುರಾವೆ ದು ಅವರು ಹೇಳುತ್ತಾರೆ.

ವಕ್ಫ್‌ನ ವಿವಿಧ ರೂಪಗಳು ಪ್ರವಾದಿಯವರ" ಕಾಲದಲ್ಲಿ ಪ್ರಚಾರದಲ್ಲಿದ್ದುವು. ನ್ನು ಇಲ್ಲಿ ಕೊಡಲಾಗಿದೆ. 1) ಜನಕಲ್ಯಾಣಕಾರಿ ಸೇವೆಗಳು ವಾಗ್ದಾನ ಮಾಡಿರುವ ಫಲ ಲಭಿಸಲಿಕ್ಕಾಗಿ ಸಹಾಬಿಗಳು ತಮ್ಮ ಮಿಗತೆಯ ಹಾಗೂ ಪ್ರಿಯ ವಸ್ತುಗಳನ್ನು

ವಕ್ಫ್ ಮಾಡುತ್ತಿದ್ದರು. ಖೈಬರ್‌ನಲ್ಲಿ ದೊರೆತ ತನ್ನ ಅತ್ಯಂತ ಪ್ರಿಯವಾದ ಭೂಮಿಯ ಉಮರ್‌ರು ದೇವಮಾರ್ಗದಲ್ಲಿ ನೀಡುವ ಆಸಕ್ತಿಯನ್ನು ಪ್ರವಾದಿವರ್ಯರಲ್ಲಿ ವ್ಯಕ್ತಪಡಿಸಿದರು. ಆಗ ಉಮರ್‌ರೊಡನೆ ಮೂಲ ಬಂಡವಾಳವನ್ನು ವಕ್ಫ್ ಮಾಡಿ ಅ ಆದಾಯವನ್ನು ದಾನ ಮಾಡುವಂತೆ ಪ್ರವಾದಿಯವರು(ಸ) ಆದೇಶಿಸಿದರು. ಪ್ರವ ಯವರ(ಸ) ಆದೇಶವನ್ನು ಉಮರ್‌ರು ಈ ರೀತಿ ಕಾರ್ಯಗತಗೊಳಿಸಿದರು. ಅ ಮೂಲವನ್ನು ಮಾರುವುದಿಲ್ಲ. ದಾನ ಮಾಡುವುದಿಲ್ಲ ಅಥವಾ ವಾರೀಸುದಾರ ಕೊಡುವುದಿಲ್ಲ. ಆದರೆ ಅದರಿಂದ ದೊರೆಯುವ ಆದಾಯವನ್ನು ಅವಶ್ಯಾರ್ಥಿಗ ಸಂಬಂಧಿಕರು, ಗುಲಾಮ ವಿಮೋಚನೆ, ದೇವ ಮಾರ್ಗ ಹೋರಾಟ, ಯಾತ್ರಿಕರು ಮ ಅತಿಥಿಗಳಿಗೆ ನೀಡಬೇಕು. ಪ್ರಸ್ತುತ ಜಮೀನಿನ ಉಸ್ತುವಾರಿ ವಹಿಸುವವನಿಗೂ ಅ ಸಂಬಂಧಿಕರಿಗೂ ಅದರ ಆದಾಯದಿಂದ ಉತ್ತಮ ರೀತಿಯಲ್ಲಿ ತಿನ್ನುವುದಕ್ಕೂ ಅಡ್ಡಿಯಿ ಆದರೆ ಅದರಿಂದ ಸಂಪತ್ತು ಶೇಖರಿಸಬಾರದು.

ಮೇಲಿನ ಹದೀಸ್‌ನಲ್ಲಿ ತಿಳಿಸಲಾದ ವಕ್ಫ್‌ನ ನಿಯಮಾವಳಿಗಳು ಇಲ್ಲಿ ಚ ವಿಷಯವಲ್ಲ. ಬದಲಾಗಿ ಜನರ ಶ್ರೇಯೋಭಿವೃದ್ಧಿಯನ್ನು ಖಾತ್ರಿಪಡಿಸುವ ಸ ರಂಗದಲ್ಲಿ ಸಂಪತ್ತು ವಕ್ಫ್ ಮಾಡುವುದು, ಸಿಂಧುವಾದ ವಕ್ಫ್‌ನ ರೂಪವಾಗಿದೆಯೆ ಸ್ಪಷ್ಟಪಡಿಸುವುದಷ್ಟೇ ಅದರ ಉದ್ದೇಶ.

2) ಮುಸ್ಲಿಮರ ಧಾರ್ಮಿಕ ಮತ್ತು ಸಾಮಾಜಿಕ ಬೇಡಿಕೆಗಳ ನಿರ್ವಹಣೆಗಾಗಿ ಕೆ ಸಹಾಬಿಗಳು ವಕ್ಫ್ ಮಾಡಿದ್ದರು. ವಲಸೆ ಹೋಗಿ ಮದೀನಕ್ಕೆ ತಲುಪಿದ ಪ್ರ ಯವರು(ಸ) ಅಲ್ಲಿ ಮಸೀದಿ ನಿರ್ಮಾಣಕ್ಕಾಗಿ ಬನೂ ನಜ್ಜಾರ್ ಗೋತ್ರದ ಜಮೀ ಆಯ್ಕೆ ಮಾಡಿದ್ದರು. ಪ್ರವಾದಿಗಳು ಅದರ ಬೆಲೆಯ ಕುರಿತು ವಿಚಾರಿಸಿದಾಗ ನಾವು ಅದ ಬಯಸುವುದಿಲ್ಲ, ಅದರ ಬೆಲೆಯನ್ನು ನಾವು ಕೇವಲ ಅಲ್ಲಾಹನಿಂದ ನಿರೀಕ್ಷಿಸುತ್ತ ಎಂದು ಉತ್ತರಿಸಿದರು. (ಬುಖಾರಿ) ಹೀಗೆ ವಕ್ಫ್ ಮಾಡಲಾದ ಭೂಮಿಯ ಮಸ್ಜಿದುನ್ನಬವಿಯನ್ನು ನಿರ್ಮಿಸಲಾಯಿತು. ಸಾಮೂಹಿಕ ಸೊತ್ತಿನ ಹಕ್ಕುದಾರರೆಲ್ಲರ ಒಪ್ಪಿಗೆಯಿದ್ದರೆ ವಕ್ಫ್ ಮಾಡಬಹುದೆಂದು ಇದರಿಂದ ವ್ಯಕ್ತವಾಗುತ್ತದೆ.

3) ಪ್ರವಾದಿಯವರು(ಸ) ಸಾಮಾಜಿಕ ಬೇಡಿಕೆಗಳಿಗಾಗಿ ಅಥವಾ ಜನೋಪಯೋ ಸೇವೆಗಳಿಗಾಗಿ ಗಮನ ಸೆಳೆದಾಗ ಸಹಾಬಿಗಳು ಅದನ್ನು ವಕ್ಫ್‌ನ ಮೂಲಕ ಈಡೇ ತ್ತಿದ್ದರು. ಮಸ್ಜಿದುನ್ನಬಿಯ ವಿಸ್ತರಣೆಗಾಗಿ ಭೂಮಿ ಖರೀದಿಸಿ ವಕ್ಫ್ ಮಾಡುವ ಸ್ವರ್ಗದಲ್ಲಿ ಅದಕ್ಕಿಂತ ಉತ್ತಮವಾದ ಭೂಮಿಯು ಪ್ರತಿಫಲವಾಗಿ ದೊರೆಯುವುದ ಪ್ರವಾದಿಯವರ(ಸ) ಕರೆಯನ್ನು ಕೇಳಿ ಉಸ್ಮಾನ್‌ರು ಜಮೀನು ಖರೀದಿಸಿ ವಕ್ಫ್ ಮಾಡಿ (ತಿಮಿ

ಪ್ರವಾದಿಯವರು(ಸ) ಮದೀನಕ್ಕೆ ತಲುಪಿದಾಗ ಅಲ್ಲಿ ಕುಡಿಯುವ ನೀರಿ ರೂಮ ಎಂಬ ಹೆಸರಿನ ಬಾವಿ ಮಾತ್ರವಿತ್ತು. ಬಾವಿಯನ್ನು ಬೆಲೆಕೊಟ್ಟು ಖರಿ ಪೌರರಿಗೆ ವಕ್ಫ್ ಮಾಡಬೇಕು. ಸಾಮಾನ್ಯ ಮುಸ್ಲಿಮರಂತೆಯೇ ಕೇವಲ ಒಂದು ಪ

ೃ ತೆಗೆಯಬೇಕು. ಹೀಗೆ ಮಾಡಲು ಸಿದ್ಧವಿರುವವರಿಗೆ ಸ್ವರ್ಗದಲ್ಲಿ ಅದಕ್ಕಿಂತ ಾದುದು ದೊರೆಯುವುದೆಂದು ಪ್ರವಾದಿಯವರು(ಸ) ಹೇಳಿದ ಕೂಡಲೇ ಉಸ್ಮಾನ್ ್ನು ಖರೀದಿಸಿ ವಕ್ಫ್ ಮಾಡಿದರು. (ತಿರ್ಮಿದಿ)

ಮೃತರ ಹೆಸರಲ್ಲಿ ವಕ್ಫ್ ಮಾಡುವುದನ್ನು ಪ್ರವಾದಿಯವರು(ಸ) ಮೆಚ್ಚಿದ್ದರು. ತ ಪ್ರತಿಫಲವು ಮೃತರಿಗೆ ನಿರಂತರ ದೊರೆಯುತ್ತಲಿರುವುದೆಂದು ಅನುಯಾಯಿಗಳಿಗೆ ದರು. ಮೃತ ತಾಯಿಯ ಹೆಸರಲ್ಲಿ ದಾನ ಮಾಡಿದರೆ ಅದರ ಪ್ರತಿಫಲವು ತಾಯಿಗೆ ರೆಯುವುದೇ ಎಂದು ವಿಚಾರಿಸಿದ ಸಅದ್ ಬಿನ್ ಉಬಾದರಿಗೆ ಪ್ರವಾದಿಯವರು(ಸ) ಿತವಾಗಿಯೂ ದೊರೆಯುವುದೆಂದು ಉತ್ತರಿಸಿದರು. ಅವರು ಪ್ರವಾದಿಯವರನ್ನು(ಸ) ನಿಲ್ಲಿಸಿ ತನ್ನ ಒಂದು ತೋಟವನ್ನು ತಾಯಿಗಾಗಿ ವಕ್ಫ್ ಮಾಡಿದರು. (ಬುಖಾರಿ)

ಜನಕಲ್ಯಾಣಕಾರಿ ಚಟುವಟಿಕೆಗಳಿಗಾಗಿ ವಕ್ಫ್ ಮಾಡುವ ಸಂಪ್ರದಾಯವು ಮುಸ್ಲಿಮರಲ್ಲಿ ಕಾಲಗಳಲ್ಲಿಯೂ ಇತ್ತು. ಜನಸೇವೆಯ ಅನೇಕ ಚಟುವಟಿಕೆಗಳ ನಿರ್ವಹಣೆಗೆ ಅದು ಯಕವಾಯಿತು.

ಸಾಮಾನ್ಯ ಜನಕಲ್ಯಾಣಕಾರಿಯಾದ ಸೇವೆಗಳಿಗೆ ಸಂಬಂಧಿಸಿ ಈ ತನಕ ವಿವರಿಸಿದ ್ಮಿ ಶಿಕ್ಷಣಗಳು ಸಂಪೂರ್ಣವಾಗಬೇಕಾದರೆ ಈ ಕೆಳಗಿನ ಆದೇಶಗಳನ್ನು ಅಗತ್ಯವಾಗಿ ನಿಸಬೇಕು.

## ರ್ವಜನಿಕ ಸೊತ್ತಿನ ನಾಶ

ಮರನೆಟ್ಟು ಬೆಳೆಸುವುದನ್ನು ಇಸ್ಲಾಮ್ ಪ್ರೋತ್ಸಾಹಿಸುತ್ತದೆ. ಆದರೆ ಸಮೃದ್ಧ ನೆರಳು ುವ ಮರಗಳನ್ನು ಕಡಿಯುವುದನ್ನು ಬಲವಾಗಿ ವಿರೋಧಿಸಿದೆ. ಹ. ಅಬ್ದುಲ್ಲಾ ಬಿನ್ ್ಶಿಯವರ ವರದಿ: ಪ್ರವಾದಿಯವರು(ಸ) "ಯಾರಾದರೂ ಅರಳಿ ಮರವನ್ನು ಕಡಿದರೆ ್ಲಾಹನು ಆತನ ತಲೆಯನ್ನು ಹಿಡಿದು ನರಕಕ್ಕೆ ಹಾಕುತ್ತಾನೆ" ಎಂದಿದ್ದಾರೆ.

ಅರಳಿ ಮರವು ಸ್ವಂತ ಒಡೆತನದಲ್ಲಿದ್ದರೆ ಅದನ್ನು ಇಷ್ಟಾನುಸಾರ ಕಡಿಯುವ ವಾ ಕಡಿಯದಿರುವ ಹಕ್ಕು ಅದರ ಒಡೆಯನಿಗಿದೆ. ಇಲ್ಲಿ ಸಾರ್ವಜನಿಕ ಒಡೆತನ ್ರುವ ಮರವನ್ನು ಕಡಿಯುವುದರ ಕುರಿತು ಹೇಳಲಾಗಿದೆಯೆಂಬುದು ಖಚಿತ. ಇಮಾಮ್ ೂದಾವೂದ್‌ರು ಈ ಹದೀಸ್‌ನ ವ್ಯಾಖ್ಯಾನದಲ್ಲಿ ಹೀಗೆ ಹೇಳಿದ್ದಾರೆ. ಯಾತ್ರಿಕರಿಗೂ ೆಗಳಿಗೂ ನೆರಳು ನೀಡುತ್ತಾ ಸಂಚಾರದ ಹಾದಿಯಲ್ಲಿ ತಲೆಯೆತ್ತಿ ನಿಂತಿರುವ ರವನ್ನು ಕಡಿಯುವುದು ಮಹಾ ಅಕ್ರಮ ಮತ್ತು ಅನ್ಯಾಯವಾಗಿದೆ. ಪ್ರಸ್ತುತ ಮರದಲ್ಲಿ ನಿಗೆ ಹಕ್ಕಿಲ್ಲದಿದ್ದರೆ ಅಲ್ಲಾಹನು ಆತನ ತಲೆಯನ್ನು ಹಿಡಿದು ನರಕಕ್ಕೆ ಹಾಕುತ್ತಾನೆ. (ಅಬೂದಾವೂದ್)

ಸಮಾಜದ ಒಟ್ಟು ಒಡೆತನದಲ್ಲಿರುವ ಯಾವುದೇ ವಸ್ತುವನ್ನು ಹಾಳುಗೆಡಹುವುದು. ಶಪಡಿಸುವುದು ಪಾಪವೆಂದು ಇದರಿಂದ ಗ್ರಹಿಸಬಹುದು. ಏಕೆಂದರೆ ಅದು ಅಲ್ಲಾಹನ

ಸೃಷ್ಟಿಗಳನ್ನು ತೊಂದರೆಪಡಿಸುವ ಹಾಗೂ ಅವರಿಗೆ ದೊರೆಯುತ್ತಿರುವ ಸೌಲಭ್ಯ ವ
ಸಂತೃಪ್ತಿಯ ನಿಷೇಧವಾಗಿದೆ. ಅದಾದರೋ ಅಲ್ಲಾಹನನ್ನು ಕುಪಿತಗೊಳಿಸುವ ಅ
ಕಾರ್ಯವಾಗಿದೆ.

## ಸಾರ್ವಜನಿಕ ಒಡೆತನವಿರುವ ಸಂಪನ್ಮೂಲಗಳು

ಉತ್ಪಾದನೆಯಲ್ಲಿ ಯಾರದೇ ಶ್ರಮಕ್ಕೆ ಪಾತ್ರವಿಲ್ಲದ ಮಾನವರ ಮೂಲ ಬೆ
ಗಳನ್ನು ಈಡೇರಿಸುವ ನೈಸರ್ಗಿಕ ಸಂಪನ್ಮೂಲಗಳು ಎಲ್ಲರಿಗೂ ಸೇರಿದೆ. ಇಸ್ಲಾಮಿ
ಕೋನದಂತೆ ಅದರಿಂದ ಪ್ರಯೋಜನ ಪಡೆಯಲು ಎಲ್ಲರಿಗೂ ಸಮಾನ ಹಕ್ಕಿದೆ. ನಿ
ಹುಲ್ಲು, ಬೆಂಕಿ ಎಂಬೀ ಮೂರು ವಿಷಯಗಳಲ್ಲಿ ಮುಸ್ಲಿಮರೆಲ್ಲರೂ ಸಮಾನ ಹಕ್ಕು
ರೆಂದು ಪ್ರವಾದಿಯವರು(ಸ) ಹೇಳಿದ್ದಾರೆ. (ಅಬೂದಾವೂದ್) ಹದೀಸ್‌
ಪರಾಮರ್ಶಿಸಲಾದ ನೀರು ಎಂಬುದರಲ್ಲಿ ಒರತೆ ನದಿ, ತೊರೆ, ಕೆರೆ, ಸರೋವರ
ಸೇರಿವೆ. ಅಂತೆಯೇ ಹುಲ್ಲು ಎಂಬುದರಲ್ಲಿ ಕಾಡುಗಳು, ಬಯಲು ಪ್ರದೇಶಗಳಲ್ಲಿ
ಹುಲ್ಲು, ಉರಿಸಲು ಉಪಯೋಗಿಸುವ ಕಟ್ಟಿಗೆ, ಬೆಂಕಿಯನ್ನು ಉರಿಸುವ ಸಾ
ಇತ್ಯಾದಿಗಳು ಸೇರಿವೆ.

## ರಾಷ್ಟ್ರೀಯ ಸಂಪನ್ಮೂಲ ಎಲ್ಲರಿಗಾಗಿ

ರಾಷ್ಟ್ರೀಯ ಮಹತ್ವವುಳ್ಳ ಜೀವನ ಸಂಪನ್ಮೂಲಗಳು ವ್ಯಕ್ತಿಯ ಖಾಸಗಿ ಒಡೆ
ಸೇರಿಸಲಾಗದು. ಅವುಗಳಿಂದ ಪ್ರಯೋಜನ ಪಡೆಯಲು ಎಲ್ಲರಿಗೂ ಸಮಾನ ಅವಕಾ
ಬೇಕೆಂದು ಇಸ್ಲಾಮ್ ಬಯಸುತ್ತದೆ. ಅಬ್ಯದ್ ಬಿನ್ ಹಮಾಲ್ ವಿವರಿಸುತ
ಅವರು ಪ್ರವಾದಿಯವರ(ಸ) ಬಳಿ ಬಂದು ಯಮನ್‌ನಲ್ಲಿರುವ ಉಪ್ಪಿನ ಗಣಿಯನ್ನು ತ
ಕೊಡಬೇಕೆಂದು ವಿನಂತಿಸಿದರು. ಪ್ರವಾದಿಯವರು(ಸ) ಅದನ್ನು ಅವರಿಗೆ ನೀಡಿ
ಅವರು ಮರಳಿ ಹೋಗುವಾಗ ಓರ್ವರು, (ಅಕ್ರಲ್ ಬಿನ್ ಹಾಬಿಸ್) ಪ್ರವಾದಿ
ರೊಡನೆ ಹೀಗೆಂದರು: ಜಲಾಗಾರದಂತೆ ಅಲ್ಲಿನ ನಿವಾಸಿಗಳೆಲ್ಲರೂ ಉಪಯೋಗಿ
ಅಕ್ಷಯ ಗಣಿಯನ್ನು ನೀವು ಅವರಿಗೆ ನೀಡಿದಿರಾ? ಆಗ ಪ್ರವಾದಿಯವರು(ಸ) ಆ ಉ
ಗಣಿಯನ್ನು ಆತನಿಂದ ಮರಳಿ ಪಡೆದು ಸಾರ್ವಜನಿಕರ ಹಿತಕ್ಕಾಗಿ ವಕ್ಫ್ ಮಾಡಿ

ಉಪ್ಪಿನ ಗಣಿಯ ಬದಲಿಗೆ ಸ್ವಲ್ಪ ಜಮೀನು ಮತ್ತು ತೋಟವನ್ನು ಆ
ನೀಡಿದರೆಂದು ಇನ್ನೊಂದು ವರದಿಯಲ್ಲಿ ಹೇಳಲಾಗಿದೆ. ಅರಾಕ್(ಒಂಟೆಗಳು ತಿ
ಎಲೆಗಳುಳ್ಳ ಮರ) ಬೆಳೆಯುವ ಯಾವುದಾದರೂ ಭೂಭಾಗವನ್ನು ಗಡಿ ಗುರ
ಒಡೆತನದಲ್ಲಿರಿಸ ಬಹುದೇ ಎಂದು ವಿಚಾರಿಸಿದ ಅಬ್ಯದ್‌ರಿಗೆ ಅಲ್ಲಿಗೆ ಒಂ
ಕಾಲು ತಲುಪದಿದ್ದರೆ ಅಡ್ಡಿಯಿಲ್ಲ ಎಂದು ಪ್ರವಾದಿಯವರು(ಸ) ಉತ್ತರಿಸಿದರು. (ತಿಮಿ
ಒಂಟೆಯ ಕಾಲು ತಲುಪುವ ಸ್ಥಳವೆಂದರೆ ಜನವಾಸದಿಂದ ದೂರವಿರುವ ಸ್ಥಳವೆಂದ
ಜನರ ಸಾರ್ವಜನಿಕ ಬೇಡಿಕೆಗಳನ್ನು ಈಡೇರಿಸುವ ಯಾವುದೇ ಸಂಪನ್ಮೂಲಗಳನ್ನು

ಗೆ ಅಥವಾ ಕೆಲವು ವ್ಯಕ್ತಿಗಳಿಗೆ ಸ್ವಂತವಾಗಿ ನೀಡುವ ಹಕ್ಕು ಆಡಳಿತಗಾರರಿಲ್ಲ
ು ಕರ್ಮಶಾಸ್ತ್ರಜ್ಞರು ಅಭಿಪ್ರಾಯಪಟ್ಟಿದ್ದಾರೆ.

ಜನರು ಪ್ರಯೋಜನ ಪಡೆಯುವ ಉಪ್ಪಿನ ಗಣಿ ಅಥವಾ ನೀರಿನ ಒರತೆಯನ್ನು
ಿತಗಾರನು ಒಬ್ಬ ವ್ಯಕ್ತಿಗೆ ನೀಡುವಂತಿಲ್ಲ. ಇಲ್ಲಿ ಉಪ್ಪು ಮತ್ತು ನೀರನ್ನು ಪ್ರಸ್ತಾಪಿಸ
ದೆ. ಇಂತಹ ಇತರ ವಸ್ತುಗಳಲ್ಲೂ ಇದರಲ್ಲಿ ಸೇರಬಹುದು. ಅಲ್ಲಾಮಾ ಇಬ್ನು
ರ ಹೀಗೆ ಬರೆಯುತ್ತಾರೆ. ಉಪ್ಪಿನ ಗಣಿಯಿರುವ ಭೂಮಿ ಅಥವಾ ಜನಸಾಮಾನ್ಯರು
ೋಜನ ಪಡೆಯುವ ಯಾವುದಾದರೂ ವಸ್ತುವನ್ನು ವಶಪಡಿಸಿಕೊಳ್ಳುವುದು
ವುದೇ ವ್ಯಕ್ತಿಗೆ ಧರ್ಮಸಮ್ಮತವಲ್ಲವೆಂಬ ವಿಷಯದಲ್ಲಿ ಕರ್ಮಶಾಸ್ತ್ರ ಪಂಡಿತರು
ತ ಹೊಂದಿದ್ದಾರೆ.

## ಗಿ ಸಂಪನ್ಮೂಲ ಮತ್ತು ಇತರರ ಹಕ್ಕು

ಸಂಪನ್ಮೂಲಗಳನ್ನು ಕೆಲವೊಮ್ಮೆ ಮನುಷ್ಯ ಕಷ್ಟಪಟ್ಟು ದುಡಿದು ಸಂಪಾದಿಸುತ್ತಾನೆ.
ಿ ಬೇಡಿಕೆಗಾಗಿ ಬಾವಿ, ಕೆರೆಗಳನ್ನು ತೋಡುವುದು ಅದಕ್ಕೆ ಉದಾಹರಣೆಯಾಗಿದೆ.
ಸಂಪನ್ಮೂಲಗಳನ್ನು ಆವಶ್ಯಾರ್ಥಿಗಳಿಗೆ ನಿಷೇಧಿಸಬಾರದೆಂದು ಇಸ್ಲಾಮ್
ಧಿಸಿದೆ. ತನ್ನ ಬಳಿಯಿರುವ ಮಿಗತೆ ನೀರನ್ನು ಆವಶ್ಯಾರ್ಥಿಗಳ ಉಪಯೋಗಕ್ಕೆ
ದೆ ತಡೆ ಹಿಡಿಯುವವರಿಗೆ ಪ್ರವಾದಿಯವರು(ಸ) ಕಠಿಣ ಎಚ್ಚರಿಕೆ ನೀಡಿದ್ದಾರೆ.

"ಮೂರು ವಿಧದ ಜನರತ್ತ ಅಲ್ಲಾಹನು ಕಣ್ಣೆತ್ತಿಯೂ ನೋಡಲಾರನು, ಅವರೊಂದಿಗೆ
ಾಡಲಾರನು ಮತ್ತು ಅವರಿಗೆ ಕಠೋರವಾದ ಶಿಕ್ಷೆಯಿದೆಯೆಂದು ಪ್ರವಾದಿಯವರು(ಸ)
ಿಸಿದ್ದಾರೆ. ಆ ಪೈಕಿ ಓರ್ವನು ತನ್ನಲ್ಲಿದ್ದ ಮಿಗತೆ ನೀರನ್ನು ಯಾತ್ರಿಕರಿಗೆ ನೀಡದೆ
ಡಿದವನಾಗಿದ್ದಾನೆ." (ಬುಖಾರಿ, ಮುಸ್ಲಿಮ್)

ಸೃಷ್ಟಿಸುವುದರಲ್ಲಿ ನಿನ್ನ ಯಾವ ಪಾತ್ರವೂ ಇಲ್ಲ. ನನ್ನ ಅನುಗ್ರಹಗಳನ್ನು ನಿನಗೆ
ಿಸಲಾಗಿದೆಯೆಂದು ಅಂಥವರೊಡನೆ ಅಲ್ಲಾಹ್ ಹೇಳುವನೆಂದು ಇನ್ನೊಂದು
ಯಲ್ಲಿದೆ. (ಬುಖಾರಿ)

ತನಗೆ ದೊರೆತಿರುವ ಜೀವನದ ಸಂಪನ್ಮೂಲಗಳಿಂದ ತಮ್ಮ ಬೇಡಿಕೆಗಳನ್ನು
ಿಸಿದ ಬಳಿಕ ಇತರರ ಬೇಡಿಕೆಗಳನ್ನು ಪರಿಗಣಿಸುವುದಕ್ಕೆ ಇಸ್ಲಾಮ್ ಎಷ್ಟೊಂದು
ನೀಡಿದೆಯೆಂದು ಮೇಲಿನ ವಚನಗಳಿಂದ ವ್ಯಕ್ತವಾಗುತ್ತದೆ.

❁❖❁

# ಸ್ವಯಂ ಸೇವಾ ಸಂಘ ಸಂಸ್ಥೆಗ

ಮಾನವನು ಕೆಲವು ಮೂಲಭೂತ ಬೇಡಿಕೆ ಮತ್ತು ನೈಸರ್ಗಿಕ ಬೇಡಿಕೆಗಳ
ಈ ಭೂಮಿಯಲ್ಲಿ ಹುಟ್ಟುತ್ತಾನೆ. ಅವುಗಳ ಈಡೇರಿಕೆಗಾಗಿ ಆತನಿಗೆ ವಿಭಿನ್ನ ರಂಗಗ
ಕುಟುಂಬ, ಹಿತಾಕಾಂಕ್ಷಿಗಳು, ಸ್ವಯಂ ಸೇವಾ ಸಂಸ್ಥೆಗಳು ಮತ್ತು ರಾಷ್ಟ್ರದ
ದೊರೆಯುತ್ತಲಿರುತ್ತದೆ. ಈ ಸಹಾಯವು ಆತನಿಗೆ ಪರಿಪೂರ್ಣವಾಗಿ ದೊರೆತರೆ
ಅಸ್ತಿತ್ವ, ಬದುಕು ಮತ್ತು ಪ್ರಗತಿಯ ಅವಕಾಶಗಳು ಹೆಚ್ಚುತ್ತವೆ. ಅವುಗಳಲ್ಲಿ ಕೆ
ಯಾದಂತೆಯೇ ಈ ಅವಕಾಶಗಳು ಮಸುಕಾಗುತ್ತವೆ. ಓರ್ವ ವ್ಯಕ್ತಿಯ ಖಾಸಗಿ ದೃಷ್ಟಿಕೆ
ದಿಂದ ನೋಡಿದಾಗ ಕೆಲವೊಮ್ಮೆ ವ್ಯಕ್ತಿ ಮತ್ತು ಸಂಸ್ಥೆಗಳ ಸೇವೆಗಳಲ್ಲಿ ವಿಶೇಷ ಅ
ಕಾಣಿಸುವುದಿಲ್ಲ. ಏಕೆಂದರೆ ಆ ಪೈಕಿ ಪ್ರತಿಯೊಂದರ ಸೇವೆಯು ತಾತ್ಕಾಲಿಕ ಮತ್ತು ತ
ಸ್ವರೂಪದ್ದಾಗಿರುತ್ತದೆ.

ಉದಾಹರಣೆಗೆ, ಶೈಕ್ಷಣಿಕ ಸಂಸ್ಥೆಗಳು, ಆರ್ಥಿಕ ಸಂಸ್ಥೆಗಳು ಮತ್ತು ಆರೆ
ಸಂಸ್ಥೆಗಳ ಸೇವೆಗಳನ್ನು ನೋಡೋಣ. ಓರ್ವ ವಿದ್ಯಾರ್ಥಿಯು ಕಲಿಕೆಯಿಂದ ವಿರಮಿ
ಆತನ ಮಟ್ಟಿಗೆ ಶಾಲೆಯ ಬೇಡಿಕೆಯು ಮುಕ್ತಾಯವಾಗುತ್ತದೆ. ನಿರುದ್ಯೋಗಿಗೆ ಉದ
ದೊರೆತಾಗ ಆತನ ಮಟ್ಟಿಗೆ ಆರ್ಥಿಕ ಸಂಸ್ಥೆಯ ಆವಶ್ಯಕತೆ ನಿವಾರಣೆಯಾಗುತ್ತದೆ.
ರೋಗಿಯ ಮಟ್ಟಿಗೆ ಆಸ್ಪತ್ರೆ, ಔಷಧಾಲಯಗಳ ಸ್ಥಿತಿಯೂ ಅಷ್ಟೆ. ಈ ಸೇವೆಯ ವಾ
ಆತನಿಗೆ ಸಂಘ ಸಂಸ್ಥೆಗಳಿರಬೇಕಾಗಿಲ್ಲ. ವ್ಯಕ್ತಿಗಳು, ಆತನ ಕುಟುಂಬ ಅಥವಾ
ಹಿತಾಕಾಂಕ್ಷಿಗಳಲ್ಲಿ ಯಾರಾದರೂ ಆ ಸೇವೆಯನ್ನು ಆತನಿಗೆ ನೀಡಬಹುದು.

ಆದರೆ ಸೇವೆಯು ಇಡೀ ಜನತೆ ಅಥವಾ ಒಂದು ವರ್ಗಕ್ಕೆ ಸಂಬಂಧಿಸಿದ್ದರೆ
ಸಂಸ್ಥೆಗಳ ಆವಶ್ಯಕತೆ ಹೆಚ್ಚುತ್ತದೆ. ಓರ್ವ ವ್ಯಕ್ತಿಯ ಬೇಡಿಕೆಯ ಸ್ಥಾನದಲ್ಲಿ
ಸಮೂಹದ ಬೇಡಿಕೆಯನ್ನು ಸಂಘ ಸಂಸ್ಥೆಗಳು ಗುರಿಯಾಗಿರಿಸುತ್ತದೆ. ಹೆಚ್ಚಿನ ರಿ
ಲ್ಲಿರುವ ಶಿಕ್ಷಣ ನೀಡಿ ಓರ್ವ ವ್ಯಕ್ತಿಯನ್ನು ಸಮಾಜದಲ್ಲಿ ಗೌರವಾರ್ಹ ಸ್ಥಾನಕ್ಕೆ
ಸುವುದು ಆ ವ್ಯಕ್ತಿಯ ಸೀಮಿತವಾದ ಸೇವೆಯಾಗಿದೆ. ಅದೇ ಒಂದು ಉತ್ತಮ ವ
ಶಾಲೆಯನ್ನು ನಡೆಸಿ ಆ ಮೂಲಕ ಅನೇಕ ಮಕ್ಕಳಿಗೆ ಶಿಕ್ಷಣ ಪಡೆಯುವ ವಾತಾವರಣ
ಸೃಷ್ಟಿಸುವುದು ಪೀಳಿಗೆಗಳ ಸೇವೆಯಾಗಿದೆ. ಆದರೆ ಅನೇಕ ಮಂದಿಯ ನಿರುದ್ಯೋ
ನಿವಾರಿಸುವ ರೀತಿಯಲ್ಲಿ ಒಂದು ಉದ್ಯೋಗ ಸಂಸ್ಥೆಯನ್ನು ಸ್ಥಾಪಿಸುವಾಗ ಅದೆ
ಸಮಾಜ ಸೇವೆಯಾಗಿ ರೂಪಾಂತರವಾಗುತ್ತದೆ. ಜನಕಲ್ಯಾಣ ಸಂಸ್ಥೆಗಳು ಸಮ

ರ್ಗಜನಿಕ ವಿಕಾಸವನ್ನು ಗುರಿಯಾಗಿರಿಸುತ್ತದೆ. ಈ ರಂಗದಲ್ಲಿ ಧಾರ್ಮಿಕ ಮತ್ತು ಂಸ್ಕೃತಿಕ ಸಂಸ್ಥೆಗಳ ಸೇವೆಯನ್ನು ನಿರ್ಲಕ್ಷಿಸುವಂತಿಲ್ಲ. ಮಾತ್ರವಲ್ಲ, ಲೌಕಿಕ ಧ್ಯೇಯಗಳ ತೇರಿಕೆಗಾಗಿ ಮಾಡುವ ಸೇವೆಗಳಿಗಿಂತ ಅದಕ್ಕೆ ಹಲವು ಪಟ್ಟು ಮಹತ್ವವಿದೆ.

ಜನಸೇವಾ ಚಟುವಟಿಕೆಗಳನ್ನು ಹೆಚ್ಚು ವ್ಯವಸ್ಥಿತ ಮತ್ತು ಕಾರ್ಯದಕ್ಷಗೊಳಿಸಿ ುರ ಅಸಂತುಲಿತತೆ ಮತ್ತು ಅಶಿಸ್ತನ್ನು ಹೋಗಲಾಡಿಸಿ ಅರ್ಹರಾದವರಿಗೆ ಅರ್ಹ ೀಯಲ್ಲಿ ಸೇವೆ ಲಭ್ಯಗೊಳಿಸಲು ಸೇವಾ ಸಂಸ್ಥೆಗಳ ಮೂಲಕ ಸಾಧ್ಯವಾಗುತ್ತದೆ. ಾನವಕುಲದ ಶ್ರೇಯೋಭಿವೃದ್ಧಿಯನ್ನು ಗುರಿಯಾಗಿರಿಸಿ ಸ್ವಯಂಸೇವಾ ಸಂಘಗಳು ಸುವ ವ್ಯಾಪಕ ಸೇವೆಗಳು ಜಾಗತಿಕ ಮಟ್ಟದಲ್ಲಿ ಗೋಚರಿಸುತ್ತಿರುವ ಪ್ರಕ್ರಿಯೆಯಾಗಿದೆ. ುಂದುವರಿದ ರಾಷ್ಟ್ರದ ಮಾನವನ ಎಲ್ಲ ಮೂಲಭೂತ ಬೇಡಿಕೆಗಳ ಈಡೇರಿಕೆಗಾಗಿ ಶ್ಯಪ್ರತ್ಯೇಕ ಸಂಸ್ಥೆಗಳು ಕಾರ್ಯಾಚರಿಸುತ್ತಿವೆ.

ಜನಸೇವಾ ರಂಗದಲ್ಲಿ ಇಂಥ ಸಂಸ್ಥೆಗಳನ್ನು ಸ್ಥಾಪಿಸಿ ಮುನ್ನಡೆಸುವುದಕ್ಕೆ ಇಸ್ಲಾಮ್ ಕ್ತಿನ ಪ್ರೋತ್ಸಾಹ ನೀಡಿದೆ. ಆ ಮೂಲಕ ಜನಸೇವೆಯೆಂಬ ಇಸ್ಲಾಮಿನ ಒಂದು ಮುಖ ಧ್ಯೇಯವು ಈಡೇರುತ್ತದೆ.

## ಂಘಟಿತ ಪ್ರಯತ್ನಗಳ ಪ್ರಯೋಜನ

ವಿಸ್ಮಯಕಾರಿ ಮತ್ತು ವಿಶೇಷ ಸೇವೆಗಳನ್ನು ನಿರ್ವಹಿಸಿದ ಕೆಲವು ಏಕಾಂಗಿ ವ್ಯಕ್ತಿಗಳು ಲ್ಲ ಸಮುದಾಯಗಳಲ್ಲಿಯೂ ಇದ್ದರು. ಮಾನವಕುಲಕ್ಕೆ ಅವರ ಸೇವೆಯಿಂದ ಲಭಿಸಿದೆ. ಯೋಜನವು ಶ್ರೇಷ್ಠ ಮತ್ತು ಅಮೂಲ್ಯವಾಗಿದೆ. ವಸ್ತುತಃ ಇಂಥ ವ್ಯಕ್ತಿಗಳು ಎಲ್ಲ ುಗಳಲ್ಲಿಯೂ ಕೇವಲ ಅಪೂರ್ವ ಪ್ರಕ್ರಿಯೆಯಾಗಿದ್ದರು. ಅದೇ ವೇಳೆ ಶಕ್ತಿ ಮತ್ತು ೀಗ್ಯತೆಯ ಸಣ್ಣ ಅಂಶ ಮಾತ್ರ ವ್ಯಕ್ತಿಯ ಸಂಪನ್ಮೂಲವಾಗಿರುತ್ತದೆ. ವ್ಯಾಪಕ ಮಾಣದಲ್ಲಿರುವ ಜನಸೇವಾ ಚಟುವಟಿಕೆಗಳಿಗೆ ಅದು ಕಿಂಚಿತ್ತೂ ಸಾಕಾಗುವುದಿಲ್ಲ. ೇಕ ಜನರು ಜತೆಗೂಡಿ ಯೋಜನಾಬದ್ಧವಾಗಿ ಪರಿಶ್ರಮಿಸಬೇಕಾದುದು ವಿಪುಲ ಸೇವಾ ಚಟುವಟಿಕೆಗಳಿಗೆ ಅತ್ಯಾವಶ್ಯಕವಾಗಿದೆ. ಕೇವಲ ಓರ್ವ ವ್ಯಕ್ತಿಯನ್ನು ಅವಲಂಬಿಸದೆ ಲವು ವ್ಯಕ್ತಿಗಳ ಹಲವು ರೀತಿಯ ಸಾಮರ್ಥ್ಯ ಮತ್ತು ಸಂಪನ್ಮೂಲಗಳನ್ನು ಏಕಕಾಲದಲ್ಲಿ ಪಯೋಗಿಸಬಹುದೆಂಬುದೇ ಸಂಘಟನೆಯ ಪ್ರಧಾನ ಮೇಲ್ಮೆಯಾಗಿದೆ. ಶಕ್ತಿಯು ಿನೀಯವಾಗಿ ಹೆಚ್ಚುವುದರಿಂದ ವ್ಯಕ್ತಿಯ ಮಿತಿಯನ್ನು ಮೀರಿದ ಅನೇಕ ಚಟುವಟಿಕೆ ನ್ನು ಸಂಘಟನೆಯ ಮೂಲಕ ಸುಲಭದಲ್ಲಿ ಸಾಧಿಸಬಹುದಾಗಿದೆ. ಹಾಗೆಯೇ ಅದು ಮಾಜದ ಪ್ರಗತಿಯನ್ನು ಕ್ಷಿಪ್ರಗೊಳಿಸಿ ನಂಬಲಸಾಧ್ಯ ರೀತಿಯಲ್ಲಿ ಹೆಚ್ಚುತ್ತದೆ. ಜನಸೇವೆಯು ಸಂಘಟಿತ ಮತ್ತು ಸುವ್ಯವಸ್ಥಿತವಾಗಿ ನಡೆಸಿದರೆ ಅದರ ಫಲಾನುಭವಿಗಳ ಕ್ಷೇತ್ರವು ಶಾಲವಾಗುತ್ತದೆ. ಜನರ ಕೊರತೆಯಿಂದಾಗಿ ಸಾಧ್ಯವಾಗದ ಅನೇಕ ಚಟುವಟಿಕೆಗಳನ್ನು ರ್ವಹಿಸಬಹುದಾದ ಪರಿಸ್ಥಿತಿ ನಿರ್ಮಾಣ ಮಾಡುತ್ತದೆ. ದೊಡ್ಡದೊಡ್ಡ ಜನಸೇವಾ ಂಸ್ಥೆಗಳ ಸ್ಥಾಪನೆ ಮತ್ತು ಅದನ್ನು ಉಳಿಸಿ ಬೆಳೆಸುವುದಕ್ಕೆ ಹಾಗೂ ಉತ್ತಮ ರೀತಿಯಲ್ಲಿ

ಮುನ್ನಡೆಸುವುದಕ್ಕೆ ಬಹಳಷ್ಟು ಜನರ ನಿರಂತರ ಸಹಭಾಗಿತ್ವ ಮತ್ತು ಸಹಕಾ ಅಗತ್ಯವಿದೆ. ಅದರ ವಿನಾ ಅದು ಸ್ಥಾಪನೆಯಾಗಲಾರದು ಅಥವಾ ಒಂದು ವ ಸ್ಥಾಪನೆಯಾದರೂ ಅದರ ಧ್ಯೇಯ ಈಡೇರಲಾರದು.

ಸಾಮೂಹಿಕ ಜನಸೇವಾ ಚಟುವಟಿಕೆಗಳನ್ನು ಇಸ್ಲಾಮ್ ಮೆಚ್ಚಿದೆ ಮ ಪ್ರೋತ್ಸಾಹಿಸಿದೆ. ಅದಕ್ಕೆ ಇಸ್ಲಾಮಿನ 'ಝಕಾತ್' ವ್ಯವಸ್ಥೆಯು ಜ್ವಲಂತ ಸಾಕ್ಷಿಯಾಗಿ ಇಸ್ಲಾಮಿನ ಮೂಲ ಕಲ್ಪನೆಯಂತೆ, ಝಕಾತ್ ಅನ್ವಯವಾಗುವ ಧನಿಕರಿಂದ ಅದ ವಸೂಲು ಮಾಡಿ, ಅದರ ಹಕ್ಕುದಾರರಿಗೆ ವಿತರಿಸಬೇಕಾದುದು ಸರಕಾರದ ಕರ್ತವ್ಯವಾಗಿ

# ಮುಸ್ಲಿಮೇತರರೊಂದಿಗೆ ಸಹಕಾ

ಮಾನವಕುಲದ ಸೇವೆ ಮತ್ತು ಅವರ ಶ್ರೇಯೋಭಿವೃದ್ಧಿಗಾಗಿರುವ ಬಹುಮ ಚಟುವಟಿಕೆಗಳಲ್ಲಿ ಮುಸ್ಲಿಮೇತರ ವ್ಯಕ್ತಿಗಳ ಮತ್ತು ಸಂಘ ಸಂಸ್ಥೆಗಳ ಸಹಕಾರ ಪಡೆ ಬಹುದು. ಅವರೊಂದಿಗೆ ಸಹಕರಿಸಬಹುದು. ಇಸ್ಲಾಮಿ ದೃಷ್ಟಿಕೋನದಂತೆ ಅದಂ ಯಾವುದೇ ಅಭ್ಯಂತರವಿಲ್ಲ. ಒಳಿತು ಮತ್ತು ದೇವಭಕ್ತಿಯಲ್ಲಿ ಎಲ್ಲರೊಡನೆ ಸಹಕ ಪಾಪ ಹಾಗೂ ಅಕ್ರಮ ಕಾರ್ಯಗಳಲ್ಲಿ ಯಾರೊಂದಿಗೆ ಸಹಕರಿಸಬಾರದೆಂಬುದು ಕುರ್‌ಆ ಮೂಲ ದೃಷ್ಟಿಕೋನವಾಗಿದೆ. (5:

ಪ್ರವಾದಿಯವರ(ಸ) ನೇಮಕಕ್ಕಿಂತ ಮುಂಚೆ ಅರೇಬಿಯಾದಲ್ಲಿ ಸುಭದ್ರ ಮ ಸುವ್ಯವಸ್ಥಿತ ರಾಷ್ಟ್ರ ವ್ಯವಸ್ಥೆಯಿರಲಿಲ್ಲ. ಆದ್ದರಿಂದ ಅಲ್ಲಿ ಸಾಮೂಹಿಕವಾಗಿಯ ರಾಜಕೀಯವಾಗಿಯೂ ಅರಾಜಕತೆ ವ್ಯಾಪಿಸಿತ್ತು. ದುರ್ಬಲ ಜನವಿಭಾಗದ ಪ್ರಾಣ-ಸೊತ ವಿತ್ತಗಳಿಗೆ ಯಾವುದೇ ಭದ್ರತೆಯಿರಲಿಲ್ಲ. ಅವರು ಹಿಂಸೆ-ದೌರ್ಜನ್ಯಗಳಿಗೆ ಗುರಿಯಾದ ಅವರ ನೆರವಿಗೆ ಅಥವಾ ಮರ್ದಕರಿಗೆ ಆ ರೀತಿ ಮಾಡಬಾರದೆಂದು ಹೇಳುವ ಯಾವೊಂ ವ್ಯವಸ್ಥೆಯೂ ಇರಲಿಲ್ಲ. ಕ್ಷುಲ್ಲಕ ಕಲಹಗಳು ಯುದ್ಧಕ್ಕೆ ಪ್ರೇರಕವಾಗುವ ಸ್ಥಿತಿ ಮ ಅವುಗಳನ್ನು ಶಮನಗೊಳಿಸುವ ಪ್ರಯತ್ನಗಳು ಅಪರೂಪವಾಗಿದ್ದುವು. ಶಾಂತಿಯ ನ ವೆಂದು ಖ್ಯಾತವಾದ ಮಕ್ಕಾದ ಅವಸ್ಥೆಯೂ ಇದಕ್ಕಿಂತ ಹೆಚ್ಚೇನೂ ಭಿನ್ನವಾಗಿರಲಿ ಸಮಾಜದ ಈ ಶೋಚನೀಯಾವಸ್ಥೆಯಲ್ಲಿ ಪ್ರಾಮಾಣಿಕವಾಗಿ ಮರುಕಪಡುತ್ತಿದ್ದ ಕೆಲವ ಅದರ ಪರಿಹಾರಕ್ಕೆ ಮುಂದಾದರು. ಆ ಬಗ್ಗೆ ಅಬ್ದುಲ್ಲಾ ಬಿನ್ ಜುದ್‌ಆನ್‌ರ ಮನೆಯ ಸಭೆ ಸೇರಿ ಸಮಾಲೋಚನೆ ನಡೆಸಿ ಅಕ್ರಮ ಮತ್ತು ಮರ್ದನವನ್ನು ಯಾವ ಬೆಲೆ ತೆತ್ತಾದ ತಡೆಯಬೇಕೆಂದು ತೀರ್ಮಾನಿಸಿದರು. ತಮ್ಮ ಪ್ರವಾದಿತ್ವದ ಕಾರ್ಯಭಾರಕ್ಕಿಂತ ಮುಂ ನಡೆದ ಈ ಒಪ್ಪಂದದಲ್ಲಿ ಪ್ರವಾದಿಯವರೂ ಭಾಗಿಯಾಗಿದ್ದರು. ಪ್ರವಾದಿಯಾಗಿ ನೇವ ಗೊಂಡ ಬಳಿಕ ಒಮ್ಮೆ ಈ ಪ್ರಯತ್ನವನ್ನು ಶ್ಲಾಘಿಸಿ ಪ್ರವಾದಿಯವರು(ಸ) ಈ ರಿ

'ದ್ದರು, "ಅಬ್ದುಲ್ಲಾ ಬಿನ್ ಜುದ್‌ಆನ್‌ರ ಮನೆಯಲ್ಲಿ ಮಾಡಿದ ಕರಾರಿನಿಂದ ನನಗೆ
ು ಒಂಟೆ (ಅರಬರ ಅತಿ ಬೆಲೆಬಾಳುವ ಸಂಪತ್ತು) ದೊರೆತುದಕ್ಕಿಂತ ಹೆಚ್ಚು
ೋಷವಾಗಿತ್ತು. ಇಸ್ಲಾಮಿನ ಆಗಮನದ ಬಳಿಕವೂ ನನ್ನನ್ನು ಅದಕ್ಕೆ ಆಮಂತ್ರಿಸಿದರೆ
ಂ ಆಮಂತ್ರಣವನ್ನು ಸಂತೋಷದಿಂದ ಸ್ವೀಕರಿಸುವೆನು. (ತಬಕಾತ್)

ಅಕ್ರಮ-ಅನ್ಯಾಯಗಳನ್ನು ಪ್ರತಿಭಟಿಸಿ ಮಾನವಕುಲದ ಸೇವೆ ಮತ್ತು ಕಲ್ಯಾಣಕ್ಕಾಗಿ
ರ್ಾಚರಿಸುವ ಯಾವುದೇ ಸಂಘಟನೆ ಮತ್ತು ಕಾರ್ಯಕ್ರಮವು ಸಮಾಜದ ಅತಿ
ತ್ವ ಬಂಡವಾಳವಾಗಿದೆ. ಈ ಬಂಡವಾಳವು ನಷ್ಟವಾಗಿ ಬಿಟ್ಟರೆ ಸಮೂಹವು ದಿವಾಳಿ
ಗುತ್ತದೆ. ಆದ್ದರಿಂದ ಈ ಸಂಪತ್ತಿನ ಸಂರಕ್ಷಣೆಗೆ ಇಸ್ಲಾಮ್ ಹೆಚ್ಚಿನ ಮಹತ್ವ
ದೆ. ಅದನ್ನು ನಿರಂತರ ಅಭಿವೃದ್ಧಿಪಡಿಸುವಂತೆ ಆಗ್ರಹಿಸಿದೆ.

## ಷ್ಟ್ರದೊಂದಿಗೆ ಸಹಕಾರ

ರಾಷ್ಟ್ರವು ಜನಸೇವೆಯ ಅತಿದೊಡ್ಡ ಸಂಸ್ಥೆಯಾಗಿದೆ. ವ್ಯಕ್ತಿ ಮತ್ತು ಸಂಘಟನೆಗಳು
ೀ ಪ್ರಬಲವಾಗಿದ್ದರೂ ಅವುಗಳ ಶಕ್ತಿ ಸಾಮರ್ಥ್ಯಗಳಿಗೆ ಯಾವಾಗಲೂ ಮಿತಿಯಿದೆ.
ಗ್ರ ರೀತಿಯಲ್ಲಿ ಸಮಾಜ ಸೇವೆ ನಿಲ್ಲಿಸಿ ಅವರ ಎಲ್ಲಾ ಸಮಸ್ಯೆಗಳನ್ನು ಬಗೆಹರಿಸು
ಕ್ಕೆ ಅಗತ್ಯವಿರುವ ಸಂಪನ್ಮೂಲ ಮತ್ತು ಶಕ್ತಿಗಳು ಅವುಗಳಿಗೆ ದೊರೆತಿರಲು
ುವಿಲ್ಲ. ಅದೇ ವೇಳೆ ರಾಷ್ಟ್ರವು ಅಮಿತ ಮತ್ತು ಅನಂತ ಸಂಪನ್ಮೂಲಗಳನ್ನು
ಂದಿರುತ್ತದೆ. ಧ್ಯೇಯವನ್ನು ಸಾಕಾರಗೊಳಿಸಲಿಕ್ಕಾಗಿ ವೈವಿಧ್ಯಮಯ ಮಾರ್ಗಗಳನ್ನು
ಲೂ ಅದಕ್ಕೆ ಸಾಧ್ಯವಿದೆ. ಆದ್ದರಿಂದ ಸಮಾಜದಲ್ಲಿ ಪ್ರಾಥಮಿಕ ಜೀವನಾವಶ್ಯಕತೆಗಳು
ಧಿಸಲ್ಪಡದೆ, ಜನರ ಅಭಿವೃದ್ಧಿಗೆ ಅಗತ್ಯವಿರುವ ಎಲ್ಲಾ ಸೌಲಭ್ಯಗಳನ್ನೂ ಅವಕಾಶ
ನ್ನೂ ಲಭ್ಯಗೊಳಿಸಿ ಸಮಾಜದ ಪುನರ್ನಿರ್ಮಾಣವು ಪ್ರತಿಯೊಂದು ಕಲ್ಯಾಣ ರಾಷ್ಟ್ರದ
ಾನು ಪರ ಮತ್ತು ನೈತಿಕ ಕರ್ತವ್ಯವೆಂದು ತಿಳಿಯಲಾಗುತ್ತದೆ. ಈ ಹೊಣೆಗಾರಿಕೆಯ
ರಾಷ್ಟ್ರಕ್ಕೆ ಅರಿವಿಲ್ಲದಿದ್ದರೆ ಅಂಥ ರಾಷ್ಟ್ರದ ಅಸ್ತಿತ್ವಕ್ಕೆ ಯಾವುದೇ ಸಮರ್ಥನೆಯಿಲ್ಲ.
ೆ ವ್ಯಕ್ತಿಗಳ ಸಹಕಾರ ದೊರೆತರೆ ಮಾತ್ರ ಇಂಥ ಘನ ಜವಾಬ್ದಾರಿಕೆಗಳನ್ನು ರಾಷ್ಟ್ರ
ತ ನಿಜಾರ್ಥದಲ್ಲಿ ನೆರವೇರಿಸಲು ಸಾಧ್ಯವೆಂಬುದು ವಾಸ್ತವಿಕತೆಯಾಗಿದೆ. ಕೇವಲ
ು ಮಾತ್ರ ಭಾವಿಸಿದರೆ ಬಡತನ, ಹಸಿವೆ, ನಿರಕ್ಷರತೆ, ನಿರುದ್ಯೋಗ, ಅನಾರೋಗ್ಯ
ುದಿ ಗಂಭೀರ ಸಾಮಾಜಿಕ ಸಮಸ್ಯೆಗಳು ಬಗೆಹರಿಯಲಾರವು. ಪ್ರತಿಯೊಬ್ಬ
ಯಲ್ಲಿಯೂ ಸಮಾಜವನ್ನು ಕ್ಲಿಷ್ಟತೆಯಿಂದ ಪಾರುಗೊಳಿಸಿ ಅದನ್ನು ಉನ್ನತಿಗೇರಿಸುವ
ಳಿಯಿದ್ದರೆ ಮಾತ್ರ ಅವು ಪರಿಹಾರವಾದೀತು. ಒಟ್ಟಿನಲ್ಲಿ ಸರಿಯಾದ ಅರ್ಥ ಅಥವಾ
ನದಲ್ಲಿ ಜನಸೇವೆ ನಡೆಯಬೇಕಾದರೆ ವ್ಯಕ್ತಿ ಮತ್ತು ರಾಷ್ಟ್ರಗಳ ಸಂಪೂರ್ಣ ಸಹಕಾರ
ತ್ತು ಸಹಭಾಗಿತ್ವ ಅವಶ್ಯವಾಗಿದೆ. ಅದರ ವಿನಾ ಜನಸೇವೆಯು ಯಾವಾಗಲೂ ಅಪೂರ್ಣ
ತ್ತು ದುರ್ಬಲವಾಗಿರುವುದು.

❀❖❀

## ಜನಸೇವೆಯ ಬಗ್ಗೆ ಕೆಲವು ತಪ್ಪುಕಲ್ಪನೆಗ

ಜನಸೇವೆಯ ಮಹತ್ವವನ್ನು ಎಲ್ಲರೂ ಅರಿತಿದ್ದಾರೆ. ಈ ಸ್ಫೂರ್ತಿ ಎಷ್ಟು ಬ ವಾಗಿರುವುದೋ ಸಮಾಜಕ್ಕೆ ಅಷ್ಟೇ ಪ್ರಯೋಜನಗಳಿವೆ. ಆದರೆ ಇದರ ಬಗ್ಗೆ ಸಮಾಜ ಕೆಲವು ವಿಕೃತ ಧೋರಣೆ ಮತ್ತು ಕಲ್ಪನೆಗಳು ಬೇರೂರಿದೆಯೆಂಬ ವಾಸ್ತವಿಕತೆಂ ಮರೆಯಬಾರದು. ಈ ವಿಷಯದಲ್ಲಿ ಹಲವು ಅಸಂತುಲನೆಗಳೂ ಇವೆ. ಇಸ್ಲಾಮ್ ಅ ತಿದ್ದಿ ಸರಿಯಾದ ದೃಷ್ಟಿಕೋನವನ್ನು ನೀಡಿತು.

ಯಾವ ವ್ಯಕ್ತಿಗೂ ಸಮಾಜದಲ್ಲಿ ಒಂಟಿಯಾಗಿ ಬಾಳಲು ಸಾಧ್ಯವಿಲ್ಲ. ಆತ ಜನರೊಡನೆ ಸಂಪರ್ಕ ಬೆಳೆಸಬೇಕಾಗುತ್ತದೆ. ಕೆಲವರು ಆತನ ಹೊಣೆಯನ್ನು ಕೊಂಡರೆ ಇತರ ಕೆಲವರ ಹೊಣೆಯನ್ನು ಆತನೂ ವಹಿಸಿಕೊಳ್ಳುತ್ತಾನೆ. ಕೆಲವ ಆತನಿಗೆ ಹಲವು ಹಕ್ಕುಗಳಿದ್ದರೂ ಇತರ ಕೆಲವರೊಡನೆ ಆತನಿಗೆ ಹೊಣೆಗಾರಿಕೆಯೂ ಈ ಹಕ್ಕು ಮತ್ತು ಹೊಣೆಗಾರಿಕೆಗಳ ವರ್ತುಲವು ಹತ್ತಿರದ ಹಾಗೂ ದೂರದ ಜನರಿಗೆ ವ್ಯಾಪಿಸುತ್ತದೆ. ಅವುಗಳ ನಿರ್ವಹಣೆಯಲ್ಲಿ ಸಂಭವಿಸಬಹುದಾದ ಅಸಂ ಮತ್ತು ಅನ್ಯಾಯ ಸಮಾಜದ ಮೇಲೆ ಪ್ರತಿಕೂಲ ಪರಿಣಾಮ ಬೀರುತ್ತದೆ.

### ಹಕ್ಕುಗಳಲ್ಲಿ ಆದ್ಯತಾ ಕ್ರಮ

ಪ್ರತಿಯೊಂದು ಸಮೂಹದಲ್ಲಿಯೂ ಮಾನವರಲ್ಲಿ ಹೇರಲಾಗುವ ಕರ್ತವ್ಯ ಹಕ್ಕುಗಳಿಗೆ ಕೆಲವು ನೈಸರ್ಗಿಕ ಆದ್ಯತಾ ಕ್ರಮಗಳಿವೆ. ಸ್ವಂತ ಹಕ್ಕುಗಳು ಈ ಆ ಕ್ರಮದಲ್ಲಿ ಮುಂಚೂಣಿಯಲ್ಲಿವೆ. ತಂದೆ-ತಾಯಿಯರು, ಪತ್ನಿ-ಮಕ್ಕಳು ಮತ್ತು ಬ ಬಳಗದವರ ಹಕ್ಕುಗಳು ಆ ಬಳಿಕ ಬರುತ್ತವೆ. ಅವರ ಬಳಿಕ ಇತರರ ಹಕ್ಕುಗಳ ಸ್ಥಾನ ಹಕ್ಕು ಮತ್ತು ಕರ್ತವ್ಯಗಳಲ್ಲಿರುವ ಈ ನೈಸರ್ಗಿಕ ಆದ್ಯತಾ ಕ್ರಮವನ್ನು ಇಸ್ಲಾ ಅಂಗೀಕರಿಸಿದೆ. ಸ್ವಂತಕ್ಕೆ ಇತರರಿಗಿಂತ ಆದ್ಯತೆ ನೀಡಬಹುದು. ಸ್ವಂತದ ಹಕು ಈಡೇರಿದಾಗ ಕುಟುಂಬದ ಹಕ್ಕುಗಳಲ್ಲಿ ಕೆಲವನ್ನು ಕಡಿತಗೊಳಿಸಿದರೂ ಚಿಂ ಹಾಗೆಯೇ ಕುಟುಂಬದವರಿಗಿಂತ ಹೆಚ್ಚಾಗಿ ಇತರರ ಹಕ್ಕುಗಳಿಗೆ ಆದ್ಯತೆ ನೀಡು ಸರಿಯಲ್ಲ. ಆದ್ಯತಾ ಕ್ರಮದಲ್ಲಿ ಮೊದಲಿಗರಾಗಿರುವವರಿಗೆ ಪ್ರಥಮ ಗಮನ ನೀಡಬ ಅದನ್ನು ಮುಂದೂಡುವಂತಿಲ್ಲ, ಕಡೆಗಣಿಸುವಂತೆಯೂ ಇಲ್ಲ. ಹಕ್ಕುಗಳ ವಿಷಯ ಇಸ್ಲಾಮ್ ನಿಗದಿಪಡಿಸಿರುವ ಆದ್ಯತಾ ಕ್ರಮವನ್ನು ಪ್ರವಾದಿಯವರಿಂದ(ಸ) ಹುರೈರಾ(ರ) ವರದಿ ಮಾಡಿದ್ದಾರೆ.

"ಮಾನವನು ತನ್ನ ಬೇಡಿಕೆ ಈಡೇರಿದ ಬಳಿಕ ನೀಡುವ ದಾನವೇ ಅತ್ಯುತ್ತಮವಾಗಿದೆ. ್ರ ಆಶ್ರಿತರಿಂದಲೇ ನಿಮ್ಮ ದಾನವನ್ನು ಆರಂಭಿಸಿರಿ." (ಬುಖಾರಿ)

ಇನ್ನೊಂದು ವರದಿಯಲ್ಲಿ ಅದನ್ನು ಮತ್ತಷ್ಟು ಸ್ಪಷ್ಟಪಡಿಸಲಾಗಿದೆ. ಒಮ್ಮೆ ಾದಿಯವರು(ಸ) ದಾನ ನೀಡುವಂತೆ ಆಜ್ಞಾಪಿಸಿದಾಗ ಓರ್ವನು ಹೇಳಿದನು, "ನನ್ನ ಒಂದು ದಿನಾರ್ ಇದೆ." ಆಗ ಪ್ರವಾದಿಯವರು(ಸ) ಅದು ನಿನಗೇ ದಾನವಾಗಿದೆ ದು ಹೇಳಿದರು, ನನ್ನ ಬಳಿ ಇನ್ನೊಂದು ದೀನಾರ್ ಇದೆ ಎಂದು ಆತ ಹೇಳಿದನು. ಪ್ರವಾದಿ ಹೇಳಿದರು, "ಅದನ್ನು ನಿನ್ನ ಮಕ್ಕಳಿಗೆ ದಾನ ಮಾಡು." ಆತ "ನನ್ನಲ್ಲಿ ಕ್ಕೊಂದು ದೀನಾರ್ ಇದೆ" ಎಂದನು. ಪ್ರವಾದಿಯವರು(ಸ) ಹೇಳಿದರು, "ಅದನ್ನು ಪತ್ನಿಗೆ ಕೊಡು." "ನನ್ನ ಬಳಿ ಮಗದೊಂದು ದೀನಾರ್ ಇದೆ" ಆತ ಹೇಳಿದ. ಾದಿಯವರು(ಸ) ಅದನ್ನು ನಿನ್ನ ಸೇವಕನಿಗೆ ದಾನ ಮಾಡುವಂತೆ ಹೇಳಿದರು. ಆತ ಃ ಇನ್ನೊಂದು ದೀನಾರ್ ಇದೆಯೆಂದು ತಿಳಿಸಿದ. ಆಗ ಪ್ರವಾದಿಯವರು(ಸ) ಳಿದರು, "ಅದನ್ನು ಎಲ್ಲಿ ವ್ಯಯಿಸ ಬೇಕೆಂದು ನಿನಗೇ ಚೆನ್ನಾಗಿ ತಿಳಿದಿದೆ."

(ಅಬೂದಾವೂದ್, ನಸಾಈ)

## ಂಧು ಬಳಗದವರಿಗೆ ಆದ್ಯತೆ

ಮಾನವನು ತನ್ನ ಸಹಜ ಸ್ವಭಾವ, ವೈಯಕ್ತಿಕ ವಿರಸ ಮತ್ತು ಕೌಟುಂಬಿಕ ಕಲಹ ಂದಾಗಿ ಕೆಲವೊಮ್ಮೆ ತನ್ನ ಬಂಧು ಬಳಗದವರ ಹಕ್ಕುಗಳನ್ನು ಮರೆತು ಬಿಡುತ್ತಾನೆ. ನು ತನ್ನವರೊಂದಿಗೆ ಸಹಾನುಭೂತಿ, ಸದ್ವರ್ತನೆ ತೋರುವುದಿಲ್ಲ. ಆದರೆ ಇತರ ಂದಿಗೆ ಪ್ರೀತಿ, ಔದಾರ್ಯ ತೋರುತ್ತಾನೆ. ತನ್ನ ರಕ್ತ ಸಂಬಂಧಿಗಳ ಮತ್ತು ುಂಬದವರ ಹಕ್ಕುಗಳನ್ನು ಸಂಪೂರ್ಣವಾಗಿ ನಿರ್ಲಕ್ಷಿಸಿ ಮರೆತು ಬಿಡುತ್ತಾರೆ. ಅದೇ ಳೆ, ಜಗತ್ತಿನ ಕಲ್ಯಾಣ ಕಾರ್ಯಗಳಲ್ಲಿ ಆಸಕ್ತಿ ತೋರಿಸುತ್ತಾರೆ. ಇದು ಇಸ್ಲಾಮ್ ಣವಾಗಿ ವಿರೋಧಿಸಿರುವ ಮತ್ತು ತೀರಾ ಅಸಹಜ ಕಾರ್ಯವಿಧಾನವಾಗಿದೆ. ಹಲವು ್ಕರ್ಮಗಳಿಗೆ ಸಂಪತ್ತನ್ನು ವ್ಯಯಿಸಬೇಕೆಂಬ ಕರೆ ನೀಡಿದ ಸಂದರ್ಭದಲ್ಲಿ ಕುಟುಂಬ ತ್ತು ಸಂಬಂಧಿಕರಿಗಾಗಿ ವ್ಯಯಿಸುವ ಹಣಕ್ಕೆ ಹೆಚ್ಚಿನ ಪುಣ್ಯಫಲದ ವಾಗ್ದಾನ ನೀಡ ಗಿದೆ. ಅಬೂಹುರೈರಾರ ವರದಿ: "ದೇವ ಮಾರ್ಗದಲ್ಲಿ ವ್ಯಯಿಸುವ ದೀನಾರ್‌ಗಳಲ್ಲಿ ಲಾಮ ವಿಮೋಚನೆ ಮತ್ತು ನಿರ್ಗತಿಕರ ಸಂರಕ್ಷಣೆಗಾಗಿ ವ್ಯಯಿಸುವುದಕ್ಕಿಂತ ಪತ್ನಿ ಕ್ಕಳಿಗಾಗಿ ವ್ಯಯಿಸುವ ದೀನಾರ್‌ಗಳಿಗೆ ಹೆಚ್ಚು ಪುಣ್ಯಫಲವಿದೆ." (ಮುಸ್ಲಿಮ್)

## ಪೇಕ್ಷಿತರ ಹಕ್ಕುಗಳ ನಿರ್ಲಕ್ಷ್ಯ

ಮಾನವರಿಗೆ ತನ್ನ ಮತ್ತು ತನ್ನ ಸಂಬಂಧಿಕರೊಡನೆ ನೈಸರ್ಗಿಕ ಪ್ರೀತಿಯಿರುವುದ ಂದ ಸಾಮಾನ್ಯವಾಗಿ ಅವರ ಹಕ್ಕುಗಳ ಹರಣವಾಗುವುದು ಕಡಿಮೆ. ಆದರೆ ಇದೇ ಪ್ರೀತಿ ವೊಮ್ಮೆ ವಿಶಾಲ ರಂಗದಲ್ಲಿ ಜನಸೇವೆಗೆ ಅಡ್ಡಿಯಾಗುತ್ತದೆ. ತನಗೆ ಮತ್ತು ತನ್ನ

ಕುಟುಂಬಕ್ಕೆ ಕೆಲವು ಹಕ್ಕುಗಳಿರುವಂತೆ ಅವಶ್ಯಕತೆಯಿರುವ ದುರ್ಬಲ ವಿಭಾಗಗಳಿ
ಕೆಲವು ಹಕ್ಕುಗಳಿವೆಯೆಂಬುದನ್ನು ಹಲವೊಮ್ಮೆ ಮಾನವನು ಮರೆತು ಬಿಡುತ್ತಾ
ಆದ್ದರಿಂದ ಅವರ ಹಕ್ಕುಗಳ ಪ್ರಜ್ಞೆ ಅಥವಾ ಅವರ ಸಮಸ್ಯೆಗಳ ಬಗ್ಗೆ ಸಹಾನುಭ
ಯಿಲ್ಲದ ಅಂತಹ ಮಂದಿ ತನ್ನ ಮತ್ತು ತನ್ನ ಕುಟುಂಬದ ಅಭ್ಯುದಯಕ್ಕೆ ಮಾತ್ರ ಮಹ
ನೀಡುತ್ತಾನೆ. ಅದಕ್ಕಾಗಿ ಅನೇಕ ಜನರ ಹಕ್ಕುಗಳನ್ನು ಕಬಳಿಸುತ್ತಾನೆ. ಅವರಿಗೆ ಅಪ
ನಷ್ಟವುಂಟು ಮಾಡುತ್ತಾನೆ. ಇದು ದೊಡ್ಡ ಅಕ್ರಮ ಮತ್ತು ಇಡೀ ಸಮಾಜಕ್ಕೆ ಕೇ
ಬಗೆಯುವುದಾಗಿದೆ. ಎಲ್ಲರ ಹಕ್ಕುಗಳನ್ನು ಈಡೇರಿಸುವುದು ಮತ್ತು ಯಾರದೇ ಹಕ್ಕುಗಳ
ಕಬಳಿಸದಿರುವುದೇ ಹಿತಾಕಾಂಕ್ಷೆಯ ನೈಜ ಬೇಡಿಕೆಯಾಗಿದೆ. ತನಗೆ ಸಂಬಂಧಪ
ಹಕ್ಕುಗಳನ್ನು ಈಡೇರಿಸಬೇಕೆಂಬ ಕರೆಯೊಂದಿಗೆ ಸಮಾಜದ ಯಾರೊಬ್ಬರ ಹಕ್ಕುಗಳನ
ಕಬಳಿಸಬಾರದೆಂದು ಇಸ್ಲಾಮ್ ಕಟುವಾಗಿ ಆದೇಶಿಸಿದೆ. ದುರ್ಬಲ ವಿಭಾಗಗಳ ಹ
ಗಳನ್ನು ಸಂರಕ್ಷಿಸದ ಸಮಾಜಕ್ಕೆ ಹೆಚ್ಚು ಬಾಳಿಕೆಯಿರುವುದಿಲ್ಲ.

(ಮಿಷ್ಕಾತ

ತನ್ನ ಮತ್ತು ತನ್ನ ಕುಟುಂಬದೊಂದಿಗಿನ ಮಾನವನ ಪ್ರೀತಿಯು ಸೀಮಾತಿ
ವಾಗಿದೆ. ಸ್ವತಃ ಆಡಂಬರಮಯ ಜೀವನ ನಡೆಸುವುದರ ಜತೆಗೆ ತನಗೆ ಸಂಬಂಧವಿರ
ಎಲ್ಲರಿಗೂ ಅಂಥ ಜೀವನಾನುಕೂಲತೆಯನ್ನು ಒದಗಿಸಲು ಆತನು ಆಗ್ರಹಿಸುತ್ತಾ
ಈ ಪ್ರಯತ್ನದಲ್ಲಿ ಅವರ ಹಕ್ಕುಗಳನ್ನು ಹರಣ ಮಾಡದೆ ಜಯ ಸಾಧಿಸುವು
ಹಲವೊಮ್ಮೆ ತ್ರಾಸದಾಯಕವಾಗಿದೆ. ಇಸ್ಲಾಮಿ ದೃಷ್ಟಿಕೋನದಂತೆ ತನ್ನ ಮತ್ತು ತ
ಕುಟುಂಬದ ಮೂಲ ಆವಶ್ಯಕತೆಗಳನ್ನು ಈಡೇರಿಸುವುದು ಮಾತ್ರ ವ್ಯಕ್ತಿಯ ಕರ್ತ
ವಾಗಿದೆ. ಆಮೇಲೆ ಸಮಾಜದಲ್ಲಿ ಇತರರ ಹಕ್ಕುಗಳು ಆರಂಭವಾಗುತ್ತವೆ.
ವಾಸ್ತವಿಕತೆಯನ್ನು ಕೆಳಗಿನ ಕುರ್‌ಆನ್ ವಚನದಿಂದ ಗ್ರಹಿಸಬಹುದು. "ನಾ
**ದೇವಮಾರ್ಗದಲ್ಲಿ ಏನು ವ್ಯಯಿಸಬೇಕೆಂದು ನಿಮ್ಮೊಡನೆ ಅವರು ಕೇಳುತ್ತಾರೆ. ಹೇಳಿ
ನಿಮ್ಮ ಆವಶ್ಯಕತೆ ಕಳೆದು ಬಾಕಿ ಉಳಿದಿರುವುದನ್ನು."**

**(ಪವಿತ್ರ ಕುರ್‌ಆನ್, 2:21**

'ಅಫ್‌ವ್' ಎಂಬ ಅರಬಿ ಪದಕ್ಕೆ ತನ್ನ ಮತ್ತು ತನ್ನ ಸಂಬಂಧಿಕರ ಆವಶ್ಯ
ಮುಗಿದು ಮಿಗತೆಯಿರುವ ಸಂಪತ್ತೆಂದು ಕುರ್‌ಆನ್ ವ್ಯಾಖ್ಯಾನಗಾರರು ಅರ್ಥೈಸಿದ್ದಾ

ಆದರೆ ಇಲ್ಲಿ ಆವಶ್ಯಕತೆಗಳಿಗೆ ಒಂದು ಮಿತಿ ನಿರ್ಧರಿಸಲಾಗಿಲ್ಲ. ಅಗತ್ಯ ಯಾವು
ಅನಗತ್ಯ ಯಾವುದೆಂಬುದನ್ನು ಬುದ್ಧಿಯುಳ್ಳ ಯಾರಿಗೂ ಸ್ವತಃ ನಿರ್ಣಯಿಸಬಹುದಾಗಿ
ತನ್ನ ಮತ್ತು ತನ್ನ ಕುಟುಂಬದ ಸುಖ-ನೆಮ್ಮದಿಯ ಬಗ್ಗೆ ಕಾಳಜಿಯಿರಿಸಿ ಅ
ಭವಿಷ್ಯವನ್ನು ಶೋಭಾಯಮಾನಗೊಳಿಸುವ ಬಗ್ಗೆ ಆಲೋಚಿಸುವುದೂ ತಪ್ಪಲ್ಲ. ಆ
ಆ ಬಗ್ಗೆ ತೀವ್ರ ಗಮನಹರಿಸಿ ಸಮಾಜದ ಸಂಕಷ್ಟ ಪೀಡಿತರನ್ನು ಮತ್ತು ಹಸಿವೆಯಿಂ
ಬಳಲುತ್ತಿರುವವರನ್ನು ಮರೆತು ಬಿಡುವ ಧೋರಣೆಯನ್ನು ಇಸ್ಲಾಮ್ ವಿರೋಧಿಸಿದೆ.

ತನ್ನ ಅತ್ಯಂತ ಆಪ್ತ ಸಂಬಂಧಿಕರ ಕರ್ತವ್ಯವನ್ನು ಪ್ರಥಮವಾಗಿ ವ್ಯಕ್ತಿಗಳ ಮೇಲೆ ರಲಾಗಿದೆಯೆಂಬುದರಲ್ಲಿ ಸಂಶಯವಿಲ್ಲ ಆದರೆ ಕೇವಲ ಅವುಗಳ ನಿರ್ವಹಣೆಯಿಂದ ಾಜದ ಓರ್ವ ಸದಸ್ಯನೆಂಬ ನೆಲೆಯಲ್ಲಿ ಆತನಲ್ಲಿ ಅರ್ಪಿತವಾಗಿರುವ ಹೊಣೆಗಾರಿಕೆ ಂದ ಮುಕ್ತನಾಗುವುದಿಲ್ಲ. ಈ ಎರಡು ಹೊಣೆಗಾರಿಕೆಗಳ ಬಗ್ಗೆ ಪ್ರಜ್ಞಾವಂತನಾಗಿ ರ ನಿರ್ವಹಣೆಗಾಗಿ ಕಾರ್ಯಾಚರಿಸುವವನೇ ಎಲ್ಲ ಸಮುದಾಯಗಳಲ್ಲಿಯೂ ಮಾದರಿ ್ತಿಯಾಗಿರುತ್ತಾನೆ. ಅಂಥ ವ್ಯಕ್ತಿತ್ವಗಳನ್ನು ರೂಪಿಸುವುದೇ ಇಸ್ಲಾಮಿನ ಧ್ಯೇಯವಾಗಿದೆ.

# ಬಡವ - ಬಲ್ಲಿದ ಪಕ್ಷಪಾತ

**ಸ**ಮಾಜದ ಬಡ ದುರ್ಬಲ ಜನ ವಿಭಾಗಗಳ ಮತ್ತು ಜೀವನಾವಶ್ಯಕತೆಗಳು ೇಧಿಸಲ್ಪಟ್ಟವರ ಸೇವೆ ಮಾಡಿ ಅವರೊಂದಿಗೆ ಉತ್ತಮ ರೀತಿಯಲ್ಲಿ ವರ್ತಿಸಬೇಕೆಂದು ್ಲಾಮ್ ಒತ್ತಿ ಹೇಳಿದೆ. ಹಾಗಿದ್ದರೂ ಪೌರೋಹಿತ್ಯ ಮತ ಮತ್ತು ಕೆಲವು ಅಸಂತುಲಿತ ್ಥಿಕ ತತ್ವ ಸಿದ್ಧಾಂತಗಳಂತೆ ಇಸ್ಲಾಮ್ ಸಮಾಜವನ್ನು ಎರಡು ಸ್ವತಂತ್ರ ವಿಭಾಗಗಳಾಗಿ ದೂ ವಿಂಗಡಿಸಿಲ್ಲ. ಸಮಾಜದ ಒಂದು ವರ್ಗವು ಆರ್ಥಿಕವಾಗಿ ಸುಸ್ಥಿತಿಯಲ್ಲಿದ್ದು ್ಲ ರೀತಿಯ ಜೀವನ ಸೌಲಭ್ಯಗಳನ್ನು ಅನುಭವಿಸುತ್ತಿರುವಾಗ, ಇನ್ನೊಂದು ವಿಭಾಗವು ಪ್ರಾಥಮಿಕ ಜೀವನಾವಶ್ಯಕತೆಗಳಿಗಾಗಿಯೂ ಪರಾವಲಂಬಿಯಾಗಿರುವ ಸ್ಥಿತಿಯು ಶ್ವತವಾಗಿರಬೇಕೆಂದು ಇಸ್ಲಾಮ್ ಎಂದೂ ಬಯಸಿಲ್ಲ. ಬದಲಾಗಿ ಸಮಾಜದ ಎಲ್ಲರೂ ್ಥಿಕ ಸ್ವಾವಲಂಬಿಗಳಾಗಬೇಕು. ಅನ್ಯರ ಮುಂದೆ ಕೈ ಚಾಚುವ ಪರಿಸ್ಥಿತಿಯ ರ್ಮೂಲನಕ್ಕಾಗಿ ಗರಿಷ್ಠ ಪ್ರಯತ್ನಿಸಬೇಕೆಂದು ಇಸ್ಲಾಮ್ ಬಯಸುತ್ತದೆ. ಆದ್ದರಿಂದ ಮತ್ತು ತನ್ನ ಆಶ್ರಿತರ ಬೇಡಿಕೆಯ ಈಡೇರಿಕೆಗೆ ಅಗತ್ಯವಿರುವ ಧರ್ಮಸಮ್ಮತವಾದ ್ಲ ರೀತಿಯ ದುಡಿಮೆಗಳಿಗೆ ಇಸ್ಲಾಮ್ ಬಹಳ ಮಹತ್ವ ನೀಡಿದೆ. ಅದಕ್ಕೆ ವಿಶೇಷ ್ಯ ಮತ್ತು ಪ್ರತಿಫಲದ ವಾಗ್ದಾನವನ್ನು ನೀಡಿದೆ. ಅದರ ಜತೆಯಲ್ಲಿ ಅಗತ್ಯಕ್ಕಿಂತ ಹೆಚ್ಚು ಕೈವಶವಿರುವ ಶ್ರೀಮಂತರು ದುರ್ಬಲ ವರ್ಗಗಳಿಗೆ ಅವರ ಆರ್ಥಿಕ ಸುಸ್ಥಿತಿಗೆ ಶ್ಯಕವಾದ ನೆರವು ನೀಡಬೇಕೆಂದು ಆದೇಶಿಸಿದೆ. ಆರ್ಥಿಕವಾಗಿ ತೀರಾ ದುರ್ಬಲ ಮತ್ತು ್ಟ ದರಿದ್ರವಾಗಿರುವವರ ಸಂರಕ್ಷಣೆಯ ಹೊಣೆಯನ್ನು ಸರಕಾರಕ್ಕೆ ನೀಡಿದೆ.

ಇಸ್ಲಾಮ್ ಝಕಾತ್‌ನ ಹಕ್ಕುದಾರರಾಗಿ ನಿರ್ಣಯಿಸಿರುವುದರಲ್ಲಿಯೂ ಈ ವಾಸ್ತವಿಕತೆ ಟ್ಟ ತೋರುತ್ತದೆ. ವಾಸ್ತವದಲ್ಲಿ ಈ ಕಡ್ಡಾಯ ದಾನವು(ಝಕಾತ್), ಬಡವರಿಗೆ(ಫಕೀರ), ದ್ರರಿಗೆ(ಮಿಸ್ಕೀನ್) ಕಡ್ಡಾಯ ದಾನಗಳ ಕೆಲಸ ಕಾರ್ಯಗಳಿಗಾಗಿ ನೇಮಕಗೊಂಡವರಿಗೆ, ನವೊಲಿಸಬೇಕಾದ ಅಗತ್ಯವಿರುವವರಿಗೆ, ಕೊರಳು ಬಿಡಿಸುವುದಕ್ಕೆ, ಸಾಲಗಾರರಿಗೆ ನೆರವು ಡಲಿಕ್ಕೆ, ಅಲ್ಲಾಹನ ಮಾರ್ಗದಲ್ಲಿ ಮತ್ತು ಪ್ರಯಾಣಿಕರ ಅನುಕೂಲಕ್ಕಾಗಿ ಖರ್ಚು

ಮಾಡಲಿಕ್ಕಾಗಿ ನಿರ್ಣಯಿಸಲಾಗಿದೆ. ಇದು ಅಲ್ಲಾಹನ ವತಿಯಿಂದ ಕಡ್ಡಾಯವಾಗಿ ಅಲ್ಲಾಹನು ಸರ್ವಜ್ಞ ಮತ್ತು ಮಹಾ ಧೀಮಂತನಾಗಿದ್ದಾನೆ.

(ಪವಿತ್ರ ಕುರ್‌ಆನ್, 9:(

ಝಕಾತ್ ಅನ್ವಯವಾಗುವಷ್ಟು ಸಂಪತ್ತು ಕೈವಶವಿರುವವರು ಅದರಿಂದ ನಿ ಪಾಲನ್ನು ಝಕಾತ್ ಆಗಿ ಪರಿಗಣಿಸಿ ಅದನ್ನು ಈ ನಿರ್ದಿಷ್ಟ ಹಕ್ಕುದಾರರಿಗೆ ನೀಡಬೇಕೆಂ ಆದೇಶಿಸಲಾಗಿದೆ. ಹಕ್ಕುದಾರರೆಲ್ಲ ಶಾಶ್ವತವಾಗಿ ಹಕ್ಕುದಾರರಾಗಿ ಉಳಿಯುವುದು, ಒಂ ವಿಭಾಗವು ಇನ್ನೊಂದು ವಿಭಾಗದ ಸಹಾಯದಿಂದ ಜೀವನ ಪರ್ಯಂತ ಉಪಜೀ ನಡೆಸುವುದು, ಒಂದು ವಿಭಾಗ ಝಕಾತ್ ನೀಡುವುದು, ಮತ್ತೊಂದು ವಿಭಾಗ ಝಕಾ ಪಡೆಯುವುದು ಇಂತಹ ಸಮಾಜವಿರಬೇಕೆಂಬುದು ಇಸ್ಲಾಮಿನ ಗುರಿಯಲ್ಲ.

ಅದರ ವ್ಯಾಖ್ಯೆಯ ಬಗ್ಗೆ ಕೆಲವು ವಿದ್ವಾಂಸರಲ್ಲಿ ಭಿನ್ನಮತವಿದ್ದರೂ ನಿರ್ದಿ ಸ್ಥಳದಲ್ಲಿ ಝಕಾತ್ ಪಡೆಯುವ ಅರ್ಹರಿಲ್ಲದಿದ್ದರೆ ಝಕಾತ್‌ನ ಅಗತ್ಯವಿರುವ ಇ ಸ್ಥಳಗಳಲ್ಲಿ ಅದನ್ನು ವ್ಯಯಿಸಬಹುದೆಂಬ ವಿಷಯದಲ್ಲಿ ಯಾರಿಗೂ ಭಿನ್ನಾಭಿಪ್ರಾಯವಿ

ಝಕಾತ್ ವ್ಯವಸ್ಥೆಯಿಂದ ದಾನಧರ್ಮಾದಿಗಳಲ್ಲಿ ಬದುಕುವ ಒಂದು ವರ್ಗವ ಸೃಷ್ಟಿಸುವುದು ಇಸ್ಲಾಮಿನ ಗುರಿಯಲ್ಲ. ಬದಲಾಗಿ ಅದು ಉಪಜೀವ ಗತ್ಯಂತರವಿಲ್ಲದೆ ಆರ್ಥಿಕವಾಗಿ ದುರ್ಬಲವಾಗಿರುವ ವರ್ಗಗಳಿಗೆ ಝಕಾತ್‌ನಿಂದ ನೀಡ ವ್ಯವಸ್ಥೆ ಮಾಡಿದೆ.

# ಭಿಕ್ಷಾಟ

"ಇಸ್ಲಾಮ್ ಭಿಕ್ಷೆ ಬೇಡುವುದನ್ನು ತಡೆದಿದೆ. ಹಾಗಿದ್ದರೂ ಕೆಲವು ಸಂ ಪರಿಸ್ಥಿತಿಗಳಲ್ಲಿ ಅದಕ್ಕೆ ಅನುಮತಿಯನ್ನು ನೀಡಿದೆ. ಹ. ಕಬೀಸ ಬಿನ್ ಮಖಾ ಹೇಳುತ್ತಾರೆ. ನಾನು ವಹಿಸಿಕೊಂಡ ಒಂದು ಆರ್ಥಿಕ ಹೊಣೆಗಾರಿಕೆಯ ಈಡೇರಿಕೆ ಪ್ರವಾದಿಯವರೊಡನೆ ನೆರವು ಕೋರಿದೆ. ಆಗ ಅವರು ಮದೀನದಲ್ಲಿಯೇ ಇರು, ನಿದೀ ಝಕಾತ್ ಸೊತ್ತು ತಲುಪಿದರೆ ನಿನ್ನ ಬೇಡಿಕೆಗಳನ್ನು ಪೂರೈಸಲಾಗುವುದೆಂದು ಹೇಳಿದ ಆ ಬಳಿಕ ಹೀಗೆಂದರು, "ಓ ಕಬೀಸಾ! ಭಿಕ್ಷಾಟನೆಯು ಮೂರು ವಿಧದ ಜನರಿಗೆ ಮ ಧರ್ಮಸಮ್ಮತವಾಗಿದೆ. 1. ಬೇರೊಬ್ಬರಿಗಾಗಿ ಸ್ವತಃ ಸಾಲಗಾರನಾದವನು ಸಾಲ ಸಂದಾ ವಾಗುವ ತನಕ ಆತ ಯಾಚಿಸಬಹುದು. 2. ಯಾವುದೇ ಅವಘಡಕ್ಕೆ ತುತ್ತಾಗಿ ಸಂಪ ಸಂಪೂರ್ಣ ನಾಶವಾದವನು ತನ್ನ ಪರಿಸ್ಥಿತಿ ಸುಧಾರಿಸುವ ತನಕ ಆತನಿಗೆ ಬೇಡುವ ಹಕ 3. ಹಸಿವೆ ಪೀಡಿತನು- ಆದರೆ ಅವನ ಜನಾಂಗದ ಮೂವರು ಆತ ಹಸಿ

ಲಿಯಾಗಿದ್ದಾನೆಂದು ಸಾಕ್ಷಿ ನುಡಿಯಬೇಕು. ಈ ಮೂರು ವಿಧದ ಪರ ಹೊರತು ಇತರೆಲ್ಲ ಕ್ಷಾಟನೆಗಳು ನಿಷಿದ್ಧವಾಗಿದೆ. ಆದರಿಂದ ತಿನ್ನುವಾತನು ಹರಾಮ್ ತಿನ್ನುತ್ತಾನೆ."

(ಮುಸ್ಲಿಮ್)

ಈ ಹದೀಸ್‌ನಲ್ಲಿ 3 ವಿಧದ ಜನರಿಗೆ ಮಾತ್ರ ಭಿಕ್ಷಾಟನೆಯ ಅನುಮತಿ ನೀಡ ಾಗಿದೆ. ಆ ಪೈಕಿ ಒಬ್ಬರು ಜನರ ವಾದವಿವಾದ, ಕಲಹಗಳನ್ನು ನಿಲ್ಲಿಸಲಿಕ್ಕಾಗಿ ವಿವಾದ ಲ್ಲಿರುವ ಉಭಯ ಕಕ್ಷಿಗಳ ಮಧ್ಯೆ ಸಾಮರಸ್ಯ ಮೂಡಿಸಲಿಕ್ಕಾಗಿ ಆರ್ಥಿಕ ಹೊಣೆಯನ್ನು ಹಿಸಿದವ. ಈ ಹೊಣೆಯನ್ನು ಆತನಿಗೆ ಒಂಟಿಯಾಗಿ ನಿರ್ವಹಿಸಲಾಗದಿದ್ದರೆ ಇತರರ ಹಾಯ ಕೋರಬಹುದು. ಅದು ಆತನ ಮೇಲಿರುವ ಸಾಲವಾಗಿದೆ. ಪ್ರಸ್ತುತ ಸಾಲ ುದಾಯಕ್ಕೆ ಸಮಾಜದ ನೆರವು ಅತ್ಯಾವಶ್ಯಕವಾಗಿದೆ.

(ಖತ್ತಾಬಿ, ಮುಆಲಿಮುಸ್ಸನನ್)

ವ್ಯಕ್ತಿ, ಸಂಘಟನೆ ಮತ್ತು ಸಮೂಹಗಳ ಪರಸ್ಪರ ಅಭಿಪ್ರಾಯ ಭಿನ್ನತೆಯು ಲವೊಮ್ಮೆ ಸಮಾಜದ ಪತನಕ್ಕೆ ಕಾರಣವಾಗುತ್ತದೆ. ಒಂದು ವರ್ಗ ಅಕ್ರಮವೆಸಗಿದಾಗ ನ್ನೊಂದು ವರ್ಗವು ಅದಕ್ಕೆ ಪ್ರತೀಕಾರವನ್ನು ಬಯಸುತ್ತದೆ. ಈ ಭಿನ್ನಮತವು ಮಿತಿಮೀರಿ ಾಗಿದರೆ ಸೊತ್ತು-ವಿತ್ತ-ಜೀವಗಳಿಗೆ ಅದರಿಂದ ಭೀಕರ ಅಪಾಯವಾಗಬಹುದು. ಇಂಥ ಲಹ ಗೊಂದಲಗಳನ್ನು ಕೆಲವೊಮ್ಮೆ ಆರ್ಥಿಕ ನೆರವಿನಿಂದ ನಿವಾರಿಸಬಹುದು ಅಥವಾ ಾಮರಸ್ಯ ಮೂಡಿಸಬಹುದು. ಪರಸ್ಪರ ಕಚ್ಚಾಡುವ ವ್ಯಕ್ತಿಗಳು ಅಥವಾ ಸಮೂಹಗಳ ುಧ್ಯೆ ಸಂಧಾನಕ್ಕಾಗಿ ಆರ್ಥಿಕ ಹೊಣೆಯನ್ನು ವಹಿಸುವುದು ಜನಸೇವೆಯ ಅತ್ಯಂತ ುದಾತ್ತ ರೂಪವಾಗಿದೆ. ಇಂಥ ಸೇವೆಗಳಲ್ಲಿ ನಿರತರಾಗುವವರಿಗೆ ಅಗತ್ಯವಿದ್ದರೆ ಇತರರಿಂದ ಯಾಚಿಸಬಹುದೆಂದು ಪ್ರಸ್ತುತ ಹದೀಸ್ ಸ್ಪಷ್ಟಪಡಿಸುತ್ತದೆ. ಅಂಥವರಿಗೆ ನೆರವಾಗುವುದು ್ಯಕ್ತಿಗಳು ಮತ್ತು ಸರಕಾರದ ಕರ್ತವ್ಯವಾಗಿದೆ. ನೈಸರ್ಗಿಕ ದುರಂತ ಮತ್ತು ವಿಕೋಪ ಳಿಂದ ಸಂತ್ರಸ್ತರಾದವರಿಗೆ ಯಾಚನೆ ಧರ್ಮಸಮ್ಮತವಾಗಿದೆ. ನೆರೆ, ಚಂಡಮಾರುತ, ೂಕಂಪ, ಅಗ್ನಿ ಅನಾಹುತ ಇತ್ಯಾದಿ ನೈಸರ್ಗಿಕ ವಿಕೋಪಗಳು ಕೆಲವೊಮ್ಮೆ ್ರೀಮಂತರನ್ನೂ ನಿರ್ಗತಿಕರಾಗಿ, ಪ್ರಾಥಮಿಕ ಜೀವನಾಶ್ಯಕತೆಗಳನ್ನೂ ಪೂರೈಸಲಾಗದ ್ತಿಗೆ ತಲುಪಿಸಿ ಬಿಡುತ್ತವೆ. ಅಂಥ ಸಂದರ್ಭಗಳಲ್ಲಿ ತಮ್ಮ ಬೇಡಿಕೆಗಳ ಈಡೇರಿಕೆಗಾಗಿ ಹಾಯ ಯಾಚಿಸಬಹುದು.

ಸ್ವಂತ ಕಾಲ ಮೇಲೆ ನಿಲ್ಲಲು ಶಕ್ತನಾಗುವ ತನಕ ಅಥವಾ ಬೇಡಿಕೆಗಳು ಈಡೇರುವ ನಕ ಯಾಚನೆ ನಡೆಸಬಹುದೆಂದು ಈ ಹದೀಸ್ ತಿಳಿಸುತ್ತದೆ. ಎರಡರ ಅರ್ಥವೂ ಒಂದೇ ಾಗಿದೆ. ಬೇಡಿಕೆಗಳ ಈಡೇರಿಕೆಗಾಗಿ ಇತರರನ್ನು ಅವಲಂಬಿಸುವ ಸ್ಥಿತಿ ಬರಬಾರದೆಂಬುದೇ ಾವೆರಡರ ಉದ್ದೇಶ. ಹಾಗೆಯೇ ಪ್ರಾಥಮಿಕ ಜೀವನಾವಶ್ಯಕತೆಗಳ ಈಡೇರಿಕೆಯನ್ನು ಸ್ಲಾಮಿನಲ್ಲಿ ಮಾನವನ ಮೂಲಭೂತ ಹಕ್ಕುಗಳ ಯಾದಿಯಲ್ಲಿ ಸೇರಿಸಲಾಗಿದೆಯೆಂಬ ಾಸ್ತವಿಕತೆಯನ್ನು ಈ ಹದೀಸ್ ಅನಾವರಣಗೊಳಿಸಿದೆ. ಆದ್ದರಿಂದಲೇ ಇಸ್ಲಾಮ್ ಟುವಾಗಿ ದ್ವೇಷಿಸುವ ಭಿಕ್ಷಾಟನೆಯನ್ನು ಈ ಮೂರು ವಿಷಯದಲ್ಲಿ ಅನುಮತಿಸಲಾಗಿದೆ.

ಹದೀಸ್‌ನಲ್ಲಿ ಪರಾಮರ್ಶಿಸಲಾಗಿರುವ ಅನಿರೀಕ್ಷಿತ ವಿಪತ್ತು ಸ್ಥಳ-ಕಾಲ ಭೇದವಿಲ್ಲ ಎಲ್ಲರನ್ನೂ ಪೀಡಿಸಬಹುದು. ಕನಿಷ್ಠಪಕ್ಷ ಇಂಥ ಸಂತ್ರಸ್ತರಿಗೆ ಮೂಲಭೂತ ಅವಶ್ಯ ಗಳನ್ನಾದರೂ ಈಡೇರಿಸುವ ಪ್ರಯತ್ನ ಸಮಾಜದಲ್ಲಿ ನಡೆಯಬೇಕು. ಇಂಥ ಪ್ರಯತ್ನಗ ವ್ಯಕ್ತಿ ಮತ್ತು ಸಂಸ್ಥೆಗಳ ಕಡೆಯಿಂದ ನಡೆದರೆ ಮಾತ್ರ ಅವರ ಸಮಸ್ಯೆಗಳು ಬಗೆಹರಿ ಬಹುದು. ತಮ್ಮ ಜೀವನದ ಮೂಲ ಬೇಡಿಕೆಗಳು ಈಡೇರದಿದ್ದರೆ ತಮಗಾದ ನಷ್ಟವ ಭರ್ತಿಗೊಳಿಸಲು ಪೀಡಿತರಿಗೆ ಸಾಧ್ಯವಾದೀತೆನ್ನುವಂತಿಲ್ಲ. ಹೆಚ್ಚಿನ ಅಭಿವೃದ್ಧಿ ಸಾಧಿಸು ಚಿಂತೆಯಂತೂ ಅವರ ಮಟ್ಟಿಗೆ ತೀರಾ ಅಸಾಧ್ಯ.

ಹಸಿವೆಯಿಂದ ಬಳಲುವ ಬಡಬಗ್ಗರು ಭಿಕ್ಷಾಟನೆಗೆ ಅನುಮತಿ ನೀಡಲಾದ ಮೂರ ವರ್ಗವಾಗಿದ್ದಾರೆ. ಹಸಿವೆ ಮತ್ತು ದಾರಿದ್ರ್ಯಕ್ಕೆ ನಿರುದ್ಯೋಗ, ಕಡಿಮೆ ಆದಾಯ ಅಥ ಅನಾರೋಗ್ಯ ಇತ್ಯಾದಿ ಕಾರಣವಾಗಿರಬಹುದು. ಈ ಪೈಕಿ ಯಾವುದೇ ಕಾರಣದಿಂ ಹಸಿದಿದ್ದರೂ ಅವರಿಗೆ ಇತರರೊಡನೆ ಬೇಡುವ ಹಕ್ಕಿದೆ. ಅವರಿಗೆ ನೆರವಾಗಬೇಕಾದು ಸಮಾಜದ ನೈತಿಕ ಮತ್ತು ಕಾನೂನುಪರ ಕರ್ತವ್ಯವಾಗಿದೆ. ಹಸಿವೆಯ ಕಾರಣವನ್ನು ಗುರುತಿ ಆ ಕಾರಣವನ್ನು ನಿವಾರಿಸುವುದಕ್ಕೆ ಹೆಚ್ಚಿನ ಮಹತ್ವವಿದೆ. ಏಕೆಂದರೆ ಸಮಸ್ಯೆ ನಿರ್ಮೂಲ ವಾಗದಿರುವ ತನಕ ಅವರು ಸಹಾಯಕ್ಕಾಗಿ ಸದಾ ಕೈಚಾಚುತ್ತಲೇ ಇರಬೇಕಾಗುತ್ತದೆ. ಅಂ ಪರಿಸ್ಥಿತಿ ಸದಾ ಮುಂದುವರಿಯಬೇಕೆಂದು ಇಸ್ಲಾಮ್ ಬಯಸುವುದಿಲ್ಲ. ಹೆಚ್ಚಿನ ಋಣಭಾ ದಿಂದ ಕಷ್ಟಪಡುವವರಿಗೂ ಭಿಕ್ಷಾಟನೆ ಧರ್ಮಸಮ್ಮತವೆಂದು ಹದೀಸ್‌ಗಳಲ್ಲಿ ಬಂದಿ

ಪ್ರವಾದಿಯವರು(ಸ) ಹೇಳಿದ್ದಾರೆ, "ಭಿಕ್ಷಾಟನೆ ಕೇವಲ ಮೂರು ವರ್ಗದ ಜನರಿ ಮಾತ್ರ ಧರ್ಮಸಮ್ಮತವಾಗಿದೆ. 1. ಬಡತನದಿಂದ ಸಂಪೂರ್ಣ ನಿಷ್ಕ್ರಿಯನಾದವನ 2. ಹೆಚ್ಚಿನ ಸಾಲದ ಹೊರೆಯಿರುವಾತನು. 3. ಕೊಲೆಪಾತಕಕ್ಕೆ ನಷ್ಟ ಪರಿಹಾರ ಕೊಡಲಾಗದ ಅಥವಾ ಆತನ ಕುಟುಂಬ." (ಅಬೂದಾವೂದ

ಕೆಲವೊಮ್ಮೆ ಜನರು ಪಾರಾಗಲಾರದ ರೀತಿಯಲ್ಲಿ ಸಾಲದಲ್ಲಿ ಮುಳುಗಿರುತ್ತಾ ಸಾಲದಿಂದಾಗಿ ಬೃಹತ್ ವ್ಯಾಪಾರಿ ಸಂಸ್ಥೆಗಳು ಮತ್ತು ಕಂಪೆನಿಗಳು ಶಾಶ್ವತವಾ ಮುಚ್ಚಲ್ಪಡುತ್ತವೆ. ಈ ರೀತಿ ಸಾಲದಲ್ಲಿ ಮುಳುಗಿದ ವ್ಯಕ್ತಿ ಅಥವಾ ಕಂಪೆನಿಗಳೊಂದಿ ಈ ಕಾಲದಲ್ಲಿ ಸಾಮಾನ್ಯವಾಗಿ ಇಬ್ಬಗೆಯ ಧೋರಣೆಯನ್ನು ಕೈಗೊಳ್ಳಲಾಗುತ್ತದೆ. ಅವ ದಿವಾಳಿಯಾಗಿರುವರೆಂದು ಬಹಿರಂಗವಾಗಿ ಘೋಷಿಸಿ ಅವರ ವ್ಯಾಪಾರವನ್ನು ಮುಕ್ತಾಂ ಗೊಳಿಸುವುದು. ಈ ನಿಷ್ಕರುಣೆಯ ಧೋರಣೆಯಿಂದ ಉತ್ತಮ ರೀತಿಯಲ್ಲಿ ಜೀವ ಸಾಗಿಸುತ್ತಿದ್ದ ಅನೇಕ ಕುಟುಂಬಗಳನ್ನು ನಿತ್ಯ ದಾರಿದ್ರ್ಯ ಮತ್ತು ಹಸಿವೆಗೆ ದೂಡಿದಂತಾ ಅವರ ಉಪಜೀವನ ಅಸ್ತವ್ಯಸ್ತವಾಗುತ್ತದೆ.

ಎರಡನೆಯದಾಗಿ ಈ ಧೋರಣೆಯಲ್ಲಿ ಸಹಾನುಭೂತಿಯ ಅಂಶ ಗೋಚರಿಸುತ್ತಿ ತಾನು ಸಿಲುಕಿರುವ ವಿಪತ್ತುಗಳಿಂದ ಹೊರಬಂದು ಜೀವನೋಪಾಯದ ಮರುಸ್ಥಾಪನೆಗಾ ಅವರಿಗೆ ಮತ್ತಷ್ಟು ಹೊಸ ಸಾಲ ನೀಡುವುದೇ ಈ ಧೋರಣೆಯ ತಿರುಳು. ಆದರೆ ಸಾಲದೊಂದಿಗೆ ಬಡ್ಡಿಯನ್ನೂ ಸಂದಾಯ ಮಾಡಬೇಕಾಗುತ್ತದೆ. ಆದ್ದರಿಂದ ಹೊ

ೀಟದ ಈ ಸಹಾನುಭೂತಿ ಕೂಡಾ ಮಾನವನ ಅನಿವಾರ್ಯ ಪರಿಸ್ಥಿತಿಯ ದುರ್ಲಾಭ
ತೆದು ಶೋಷಿಸುವ ಉಪಾಧಿಯಾಗಿ ಮಾರ್ಪಟ್ಟಿದೆ. ಎಂದಿಗೂ ಪಾರಾಗಲಾರದ ರೀತಿಯಲ್ಲಿ
ು ಮಾನವನನ್ನು ಸಾಲದಿಂದ ಸಾಲಕ್ಕೂ ಬಡ್ಡಿಯಿಂದ ಚಕ್ರಬಡ್ಡಿಗೂ ಎಳೆದೊಯ್ಯುತ್ತದೆ.
ು ಕಡೆಗೆ ಸ್ವತಃ ದಿವಾಳಿಯೆಂದು ಘೋಷಿಸಿ ಫ್ಯಾಕ್ಟರಿಯನ್ನು ಮುಚ್ಚಿ ಮೊಹರು
ಕಬಯಸುತ್ತಾನೆ.

ಧರ್ಮಸಮ್ಮತ ಧ್ಯೇಯಕ್ಕಾಗಿ ಓರ್ವನು ಧರ್ಮಸಮ್ಮತ ಮಾರ್ಗದಿಂದ ಸಾಲ
ತೆಯುತ್ತಾನೆ. ಏನಾದರೂ ನಿರ್ಬಂಧಿತ ಸ್ಥಿತಿಯಿಂದಾಗಿ ಆ ಸಾಲವನ್ನು ಮರಳಿಸಲಾಗ
ಥ ಪರಿಸ್ಥಿತಿ ಬಂದು ಆ ಸಾಲವನ್ನು ತೀರಿಸಲಾಗದಿದ್ದರೆ ಆತನಿಗೆ ನೆರವಾಗುವುದು
ಮಾಜದ ಕರ್ತವ್ಯವೆಂದು ಇಸ್ಲಾಮ್ ಭಾವಿಸುತ್ತದೆ. ಅದಕ್ಕಾಗಿ ಅವನು ನೆರವಿಗಾಗಿ
ಮಾಜ ಮತ್ತು ರಾಷ್ಟ್ರವನ್ನು ವಿನಂತಿಸಬಹುದಾಗಿದೆ. ಝಕಾತ್‌ನಲ್ಲಿ ಅವನಿಗಾಗಿ ವಿಶೇಷ
ಲನ್ನು ಮೀಸಲಿರಿಸಲಾಗಿದೆ. ಈ ಎರಡು ಧೋರಣೆಗಳನ್ನು ವಸ್ತುನಿಷ್ಠವಾಗಿ ಹೋಲಿಸುವ
ತಿಯೊಬ್ಬರಿಗೂ ಇಸ್ಲಾಮಿನ ಧೋರಣೆಯು ಸಹಾನುಭೂತಿ ಪರ ಮತ್ತು ಮಾನವೀಯತೆ
ಂದ ಕೂಡಿದ್ದೆಂದು ಒಪ್ಪಲೇಬೇಕಾಗುತ್ತದೆ. ಆಧುನಿಕ ಕಾಲವು ನಿಷ್ಕರುಣೆ ಮತ್ತು
ುಮ ಧೋರಣೆಯನ್ನು ಕೈಗೊಳ್ಳುತ್ತಿದೆಯೆಂಬುದನ್ನು ಗಮನಿಸಬೇಕಾಗಿದೆ.

## ನಸೇವೆಯು ಸಂಪೂರ್ಣ ಧರ್ಮವಲ್ಲ?

ವಿಶ್ವಾಸದ ಬಳಿಕ, ಸತ್ಕರ್ಮವು ಇಸ್ಲಾಮಿನ ಮೂಲ ಬುನಾದಿಯಾಗಿದೆ. ಆದರೆ
ಲ್ಲ ಸತ್ಕರ್ಮಗಳಿಗೆ ಒಂದೇ ಪದವಿ ಅಥವಾ ಮಟ್ಟವಿರುವುದಿಲ್ಲ. ಅವುಗಳಲ್ಲಿ ಕೆಲವು
ರ್ಮಗಳಿಗೆ ವಿಶೇಷ ಮಹತ್ವವಿದೆ. ಇತರ ಕೆಲವುಗಳಿಗೆ ತುಲನಾತ್ಮಕವಾಗಿ ಕಡಿಮೆ
ಹತ್ವವಿದೆ. ಕೆಲವು ಧರ್ಮದ ಮೂಲ ಅಂಶಗಳಾಗಿದ್ದರೆ, ಇತರ ಕೆಲವು ಅನಿವಾರ್ಯ
ತ್ತು ಅಪೇಕ್ಷಣೀಯವಾಗಿದೆ. ಇನ್ನು ಕೆಲವು ಅಂಶಗಳು ಧರ್ಮಸಮ್ಮತವೆಂಬ ಗುಂಪಿಗೆ
ುತ್ತದೆ. ಕರ್ಮಶಾಸ್ತ್ರದ ಸಾಂಕೇತಿಕ ಭಾಷೆಯಲ್ಲಿ ಈ ವ್ಯತ್ಯಾಸಗಳನ್ನು ಫರ್ದ್,
ಜಿಬ್, ಮಂದೂಬ್, ಮುಸ್ತಹಬ್ಬ್ ಮತ್ತು ಮಬಾಹ್ ಮುಂತಾದ ಸಂಕೇತಗಳಿಂದ
ರಿಸಲಾಗುತ್ತದೆ. ಶ್ರೇಷ್ಠತೆಗೆ ತಕ್ಕಂತೆ ಕರ್ಮಗಳಲ್ಲಿ ಕೆಲವು ಆದ್ಯತಾ ಕ್ರಮವನ್ನು
ೀಅತ್ ನಿರ್ಣಯಿಸಿದೆ. ಅವುಗಳನ್ನು ನಿಖರವಾಗಿ ಪಾಲಿಸಬೇಕಾದುದು ಶರೀಅತ್‌ನ ಸ್ಥಿರತೆ
ತ್ತು ಭದ್ರತೆಗೆ ಅತ್ಯಾವಶ್ಯಕ ಮತ್ತು ಅನಿವಾರ್ಯವಾಗಿದೆ. ಅನ್ಯಥಾ ಶರೀಅತ್
ವಸ್ಥೆಯು ಛಿದ್ರವಾದೀತು.

ಜನಸೇವೆಗೆ ಶರೀಅತ್ ಬಹಳ ಮಹತ್ವ ನೀಡಿದೆಯೆಂಬ ವಿಷಯದಲ್ಲಿ ಯಾವುದೇ
ಶಯವಿಲ್ಲ. ಆದರೆ ಅದುವೇ ಸಂಪೂರ್ಣ ಧರ್ಮವೋ ಅಥವಾ ಧರ್ಮದ ತಿರುಳೋ
ಲ್ಲ. ಕೆಲವು ಮಹಾನುಭಾವರ ಕುರಿತು, 'ಸೇವೆಯೇ ಅವರ ಧರ್ಮ'ವೆಂದು ಹೇಳುತ್ತಾರೆ.
ಯಶಃ ಜನಸೇವೆಯ ಶ್ರೇಷ್ಠತೆಯನ್ನು ವಿವರಿಸುವುದೇ ಅದರ ಉದ್ದೇಶವಾಗಿರಬಹುದು.
ಿದ್ದರೂ ಅವುಗಳಲ್ಲಿ ಅತಿಶಯೋಕ್ತಿಯ ಅಂಶ ಖಂಡಿತವಾಗಿಯೂ ಇದೆ. ಆದರೆ

ಅದರಿಂದಾಗಿ ಧರ್ಮದ ಹಲವು ಪ್ರಮುಖ ಬೇಡಿಕೆಗಳ ಮೌಲ್ಯವು ಕುಸಿಯಬಹು ಅಥವಾ ಅವುಗಳಿಗೆ ಸೂಕ್ತ ಗಮನ ದೊರೆಯಲಾರದು. ಈ ಮಹಾನುಭಾವರ ಜೀವ ಇತರ ಶೋಭಾಯಮಾನ ಅಂಶಗಳು ಸಮಾಜದ ಗಮನಕ್ಕೆ ಬರುವುದಿಲ್ಲ. ಇ ಅಸಂತುಲಿತ ಧೋರಣೆಯನ್ನು ಸೇವೆಯ ಕುರಿತು ಇತರ ಧರ್ಮಗಳ ಅನುಯಾಯಿಗ ಸ್ವೀಕರಿಸುವುದು ಕಂಡು ಬರುತ್ತದೆ. ಕೇವಲ ಸೇವೆಯನ್ನೇ ಕೆಲವು ಮತಗಳು ತಿರುಳು ಮ ಮೂಲ ಧ್ಯೇಯವೆಂದು ಭಾವಿಸುತ್ತವೆ. ಮಕ್ಕಾದ ಬಹುದೇವ ವಿಶ್ವಾಸಿಗಳು ಇಂಥ ಕೇ ಧೋರಣೆಗಳನ್ನು ಹೊಂದಿದ್ದರೆಂದು ಕುರ್‌ಆನ್ ಸೂಚಿಸುತ್ತದೆ. ಕಅಬಾ ಪರಿಪಾ ಯಾತ್ರಾರ್ಥಿಗಳಿಗೆ ಕುಡಿಯುವ ನೀರು ವಿತರಣೆ ಇತ್ಯಾದಿಗಳನ್ನು ಅವರು ಪ್ರತಿಫಲಾ ಮತ್ತು ಉತ್ಕೃಷ್ಟ ಪುಣ್ಯ ಕರ್ಮವೆಂಬ ದೃಷ್ಟಿಯಿಂದಲೇ ನಿರ್ವಹಿಸುತ್ತಿದ್ದರು. ಈ ರೀತಿ ಸೇವೆಗಳಿಗಾಗಿ ಅವರು ಹೆಮ್ಮೆಪಡುತ್ತಿದ್ದರು. ಆ ಮೂಲಕ ಕಅಬಾಲಯದ ಸಂರಕ್ಷಕ ತಮ್ಮನ್ನು ಅವರು ಸ್ವತಃ ಕಲ್ಪಿಸಿಕೊಂಡಿದ್ದರು. ಇಸ್ಲಾಮ್ ಎಲ್ಲ ವಿಷಯಗಳಲ್ಲಿಯ ಅಸಂತುಲನೆ, ಮಿತಿಮೀರಿಕೆಯನ್ನು ನಿರುತ್ತೇಜಿಸಿದೆ. ಪ್ರತಿಯೊಂದು ಕರ್ಮಗಳನ್ನು ಅ ಸ್ಥಾನದಲ್ಲಿ ಇರಿಸಿದೆ. ಆದ್ದರಿಂದ ನಾವು ಶ್ರೇಷ್ಠವೆಂದು ಭಾವಿಸುವ ಯಾವ ಸೇವೆ ಅಲ್ಲಾಹ್ ಮತ್ತು ಅಂತ್ಯ ದಿನದಲ್ಲಿರುವ ವಿಶ್ವಾಸ, ನಮಾಝ್, ದೇವಭ ದೇವಮಾರ್ಗದಲ್ಲಿ ಜಿಹಾದ್, ಆರ್ಥಿಕ ತ್ಯಾಗ, ವಲಸೆ ಇತ್ಯಾದಿ ಉದಾತ್ತ ಕರ್ಮಗ ಸರ್ವಥಾ ಪರ್ಯಾಯವಾಗುವುದಿಲ್ಲ, ಈ ಗುಣಗಳನ್ನು ಹೊಂದಿದವರೇ ಕಅಬ ಮೇಲ್ವಿಚಾರಕರಾಗಬಲ್ಲರು, ನೀವಲ್ಲ ಎಂದು ಕುರ್‌ಆನ್ ಬಹುದೇವ ವಿಶ್ವಾಸಿಗ ಸ್ಪಷ್ಟಪಡಿಸಿದೆ.

"ಅಲ್ಲಾಹ್ ಮತ್ತು ಅಂತಿಮ ದಿನದ ಮೇಲೆ ವಿಶ್ವಾಸವಿರಿಸುವವರೂ ನಮಾಝ ಸಂಸ್ಥಾಪಿಸುವವರೂ ಝಕಾತ್ ಕೊಡುವವರೂ ಅಲ್ಲಾಹನನ್ನು ಹೊರತು ಇನ್ನಾರ ಭಯಪಡದವರೂ ಮಾತ್ರ ಅಲ್ಲಾಹನ ಮಸೀದಿಗಳನ್ನು ನೆಲೆಗೊಳಿಸುವವ(ಮೇಲ್ವಿಚಾ ಮತ್ತು ಸೇವಕ)ರಾಗಬಲ್ಲರು. ಅವರು ಮಾತ್ರ ಸನ್ಮಾರ್ಗದಲ್ಲಿ ನಡೆಯುವರೆಂದು ನಿರೀ ಬಹುದು. ಹಜ್ಜ್ ಯಾತ್ರಿಕರಿಗೆ ಜಲಪಾನ ಮಾಡಿಸುವುದನ್ನು ಮತ್ತು ಮಸ್ಜಿದುಲ್ ಹರಾವ ಸೇವೆಯನ್ನು ನೀವು ಅಲ್ಲಾಹನ ಹಾಗೂ ಅಂತಿಮ ದಿನದ ಮೇಲೆ ವಿಶ್ವಾಸವಿಟ್ಟು ಅಲ್ಲಾ ಮಾರ್ಗದಲ್ಲಿ ಜೀವದ ಹಂಗು ತೊರೆದು ಹೋರಾಟ ನಡೆಸಿದವನ ಕರ್ಮಕ್ಕೆ ಸರಿಸವ ವೆಂದು ಪರಿಗಣಿಸಿದಿರಾ? ಅಲ್ಲಾಹನ ದೃಷ್ಟಿಯಲ್ಲಿ ಇವರಿಬ್ಬರೂ ಸರಿಸಮಾನರಲ್ಲ ಮ ಅಲ್ಲಾಹ್ ಅಕ್ರಮಿಗಳಿಗೆ ಸನ್ಮಾರ್ಗದರ್ಶನ ಮಾಡಿಸುವುದಿಲ್ಲ. ಸತ್ಯವಿಶ್ವಾಸವನ್ನು ಕೈಗೊ ಅಲ್ಲಾಹನ ಮಾರ್ಗದಲ್ಲಿ ಮನೆ ಮಾರುಗಳನ್ನು ಬಿಟ್ಟು ಮತ್ತು ತನುಧನಗಳಿಂದ ಹೋ ನಡೆಸಿದವರ ಪದವಿಯೇ ಅಲ್ಲಾಹನ ಬಳಿ ಉನ್ನತವಾಗಿರುತ್ತದೆ. ಅವರೇ ವಿಜಯಿಗಳ

(ಪವಿತ್ರ ಕುರ್‌ಆನ್, 9:18-

ಮಾನವ ಸೇವೆ ಮತ್ತು ಅವರ ಕ್ಷೇಮಾಭಿವೃದ್ಧಿಗಾಗಿ ಮಾಡುವ ಪರಿಶ್ರ ಧರ್ಮದ ಬಹುಮುಖ ಬೇಡಿಕೆಗಳಲ್ಲಿ ಸೇರಿದೆ. ಆದರೆ ಅವುಗಳ ನಿರ್ವಹಣೆಯ

ಯಾರೊಬ್ಬರೂ ಧರ್ಮದ ಇತರ ಬೇಡಿಕೆಗಳಿಂದ ಮುಕ್ತರಾಗುವುದಿಲ್ಲ. ಧರ್ಮವು ತನ್ನೊಡನೆ ಯಾವಾಗ ಯಾವ ಬೇಡಿಕೆಯನ್ನು ಈಡೇರಿಸಬೇಕೆಂದು ಹೇಳುತ್ತದೆಯೋ ವುಗಳನ್ನು ನಿಶ್ಚಯವಾಗಿಯೂ ಪೂರೈಸಬೇಕು.

## ಪ್ರಾಮಾಣಿಕತೆ

ಎಲ್ಲ ಚಟುವಟಿಕೆಗಳಿಗೂ ಪ್ರೇರಣೆ ಬಹಳ ಮುಖ್ಯವಾಗಿದೆ. ಒಂದೇ ಚಟುವಟಿಕೆಯ ಿನ್ನೆಲೆಯಲ್ಲಿ ಉತ್ತಮ ಮತ್ತು ಕೆಟ್ಟ ಪ್ರೇರಣೆಗಳಿರಬಹುದು. ಇಸ್ಲಾಮ್ ಈ ಪ್ರೇರಣೆಗೆ ಮೂಲಭೂತ ಪ್ರಾಮುಖ್ಯತೆ ನೀಡಿದೆ. ಇಸ್ಲಾಮಿ ದೃಷ್ಟಿಕೋನದಂತೆ ಕರ್ಮವು ಕೇವಲ ಧರ್ಮಸಮ್ಮತ ಮತ್ತು ಉತ್ತಮವಾಗಿದ್ದರೆ ಸಾಲದು. ಅದರ ಪ್ರೇರಣೆ ಅಥವಾ ಪ್ರಚೋದನೆಯೂ ಉತ್ತಮವಾಗಿರಬೇಕು. ನೈಜ ಪ್ರೇರಣೆಗೆ ಇಸ್ಲಾಮ್ ಪ್ರಾಮಾಣಿಕತೆ ಎಂದು ಹೆಸರಿಸಿದೆ. ಕೆಟ್ಟ ಪ್ರೇರಣೆಗೆ ಡಾಂಬಿಕತೆ ಅಥವಾ ಕಾಪಟ್ಯವೆಂಬ ಸಮಗ್ರ ಪದವನ್ನು ಪ್ರಯೋಗಿಸಿದೆ.

ಜನಸೇವೆಯು ಪುಣ್ಯ ಕರ್ಮ ಮತ್ತು ದೇವ ಸಾಮೀಪ್ಯದ ಮಾರ್ಗವೆಂಬುದರಲ್ಲಿ ಸಂಶಯವಿಲ್ಲ. ಅದಕ್ಕೆ ಶ್ರೇಷ್ಠ ಪ್ರತಿಫಲದ ವಾಗ್ದಾನ ನೀಡಲಾಗಿದೆ. ಆದರೆ ಪರಿಪೂರ್ಣ ಪ್ರಾಮಾಣಿಕತೆಯಿಂದ ದೇವ ಸಂಪ್ರೀತಿಯನ್ನು ಧ್ಯೇಯವಾಗಿ ನಿರ್ವಹಿಸಿದಾಗ ಮಾತ್ರ ಆ ಪ್ರತಿಫಲಕ್ಕೆ ಮಾನವನು ಅರ್ಹನಾಗುತ್ತಾನೆ. ಕುರ್‌ಆನ್ ಖರ್ಚು ಮಾಡಲು ಹೇಳಿರುವ ಸ್ಥಳಗಳಲ್ಲಿ ಈ ವಾಸ್ತವಿಕತೆಯನ್ನು ಸ್ಪಷ್ಟವಾಗಿ ವಿವರಿಸಿದೆ. ಜನಸೇವೆಯ ಪ್ರತಿಯೊಂದು ಹಂತದಲ್ಲಿಯೂ ಹಣದ ವ್ಯಯವು ಅವಶ್ಯಕವಾಗುತ್ತದೆ. ಆದರೆ ಈ ಹಾದಿಯಲ್ಲಿ ಹಣ ವ್ಯಯಿಸುವುದಕ್ಕಿಂತ ಆ ವಿಷಯದಲ್ಲಿ ಪ್ರಾಮಾಣಿಕತೆಯನ್ನು ಕಾಯ್ದುಕೊಳ್ಳುವುದು ಪ್ರಸದಾಯಕವಾಗಿದೆ. ಪ್ರಾಮಾಣಿಕತೆಯಿಂದ ದೇವಮಾರ್ಗದಲ್ಲಿ ಸಂಪತ್ತು ವ್ಯಯಿಸುವ ದೇವಭಕ್ತನನ್ನು ಶ್ಲಾಘಿಸಿ ಪರಲೋಕದ ಸೌಭಾಗ್ಯದ ಬಗ್ಗೆ ಆತನಿಗೆ ಸುವಾರ್ತೆಯನ್ನು ನೀಡಲಾಗಿದೆ. "ಅತ್ಯಂತ ಧರ್ಮನಿಷ್ಠನು ಅದರಿಂದ ದೂರವಿರಿಸಲ್ಪಡುವನು. ಪುನೀತನಾಗಲಿಕ್ಕಾಗಿ ತನ್ನ ಸಂಪತ್ತನ್ನು ದಾನ ಮಾಡುವವನು. ಅವನು ಪ್ರತಿಫಲ ಕೊಡ ಬೇಕಾದಂತಹ ಯಾರ, ಯಾವ ಉಪಕಾರ ಭಾರವೂ ಅವನ ಮೇಲಿಲ್ಲ. ಅವನಂತು ಕೇವಲ ತನ್ನ ಸರ್ವೋನ್ನತ ಪ್ರಭುವಿನ ಪ್ರಸನ್ನತೆಗಾಗಿ ಈ ಕಾರ್ಯವನ್ನು ಮಾಡುತ್ತಾನೆ ಮತ್ತು ಅವನು ಖಂಡಿತವಾಗಿಯೂ (ಇವನಿಂದ) ಪ್ರಸನ್ನನಾಗುವನು."

(ಪವಿತ್ರ ಕುರ್‌ಆನ್, 92:17-20)

ಈ ಕುರ್‌ಆನ್ ವಚನವು ಹ. ಅಬೂಬಕರ್‌ರ ವಿಷಯದಲ್ಲಿ ಅವತೀರ್ಣಗೊಂಡಿದೆ ಯೆಂದು ಹಲವರು ಅಭಿಪ್ರಾಯಪಟ್ಟಿದ್ದಾರೆ. ಇಸ್ಲಾಮಿನ ಪ್ರಾರಂಭ ಹಂತದಲ್ಲಿ ಇಸ್ಲಾಮ್ ಸ್ವೀಕರಿಸಿದವರು, ವಿಶೇಷತಃ ಗುಲಾಮರು, ಕ್ರೂರ ಹಿಂಸೆ ಮರ್ದನಗಳಿಗೆ ಗುರಿಯಾಗಿದ್ದರು. ಹ. ಅಬೂಬಕರ್ ಈ ರೀತಿ ಅನೇಕ ಮರ್ದಿತ ಗುಲಾಮರನ್ನು ಬೆಲೆ ಕೊಟ್ಟು ಖರೀದಿಸಿ ಸ್ವತಂತ್ರಗೊಳಿಸಿದ್ದರು. ಅದರಲ್ಲಿ ಹ. ಬಿಲಾಲ್(ರ) ಕೂಡಾ ಒಬ್ಬರು. ಬಿಲಾಲ್ ಮಾಡಿದ

ಯಾವುದೋ ಔದಾರ್ಯದ ಪ್ರತ್ಯುಪಕಾರವಾಗಿರಬಹುದೆಂದು ಕೆಲವರು ಅಬೂಬಕರ್ ಈ ಕ್ರಮವನ್ನು ವ್ಯಾಖ್ಯಾನಿಸಿದ್ದಾರೆ. ಈ ಕುರ್‌ಆನ್ ವಚನವು ಅವರ ವ್ಯಾಖ್ಯಾನವನ ಅಲ್ಲಗಳೆದು ಅಬೂಬಕರ್‌ರ ಪ್ರಾಮಾಣಿಕತೆಯನ್ನು ಪ್ರಶಂಸಿಸಿದೆ.

ಅಬೂಬಕರ್‌ರ ಈ ಧನವೆಚ್ಚವು ಇಸ್ಲಾಮಿ ಸೇವೆ ಮತ್ತು ಮಾನವೀಯ ಸೇ ಯೆಂದು ಪರಿಗಣಿಸಿದರೆ ತಪ್ಪಿಲ್ಲ. ಅದರ ಹಿಂದೆ ಕೇವಲ ದೇವಪ್ರೀತಿ ಎಂಬ ಒಂದ ಭಾವನೆಯಿದ್ದು ಇತರೆಲ್ಲ ಪ್ರೇರಣೆಗಳಿಂದ ಮುಕ್ತವಾಗಿತ್ತು. ಆದ್ದರಿಂದಲೇ ದೇವನ ಸಂಪ್ರೀತನಾಗಿರುವನೆಂಬ ಸುವಾರ್ತೆಯು ಅವರಿಗೆ ದೊರೆಯಿತು.

ಈ ವಚನದಲ್ಲಿ ವಿವರಿಸಲಾಗಿರುವ ಎಲ್ಲ ಗುಣಗಳೂ ಪೂರ್ಣ ರೂಪದಲ್ಲಿಯೆ ಅಬೂಬಕರ್‌ರಲ್ಲಿ ಮೇಳೈಸಿತ್ತು. ಆದ್ದರಿಂದ ಈ ನಿಟ್ಟಿನಲ್ಲಿ ಅವರಿಗೆ ಪ್ರಥಮ ಸ್ಥಾ ದೊರೆಯಿತು. ಆದರೂ ವಚನದ ಪದವು ಸಾಮಾನ್ಯವಾಗಿದ್ದು, ಇಡೀ ಸಮುದಾಯಕ ಅನ್ವಯವಾಗುತ್ತದೆ. **(ತಫ್ಸೀರ್ ಇಬ್ನು ಕಸೀರ್ 6/522**

ಒಟ್ಟಿನಲ್ಲಿ ಇಲ್ಲಿ ವಿವರಿಸಿದ ಗುಣವನ್ನು ಮೈಗೂಡಿಸುವ ಪ್ರತಿಯೊಬ್ಬರಿಗೂ ಶ್ರೇಷ್ಠ ದೊರೆಯುತ್ತದೆ.

## ಪ್ರಾಮಾಣಿಕ ವೆಚ್ಚದ ಪ್ರತಿಫಲ

ಕೇವಲ ಅಲ್ಲಾಹನ ಪ್ರೀತಿ ಮತ್ತು ಸಂತೃಪ್ತಿಯ ಆಕಾಂಕ್ಷೆಯಿಂದ ಹಣ ವ್ಯಯ ಪುಣ್ಯ ಮತ್ತು ಪ್ರತಿಫಲವನ್ನು ಕುರ್‌ಆನ್ ಮನೋಹರವಾಗಿ ವರ್ಣಿಸಿದೆ. **"ಇವಕ ವ್ಯತಿರಿಕ್ತವಾಗಿ ತನ್ನ ಸಂಪತ್ತನ್ನು ಕೇವಲ ಅಲ್ಲಾಹನ ಸಂತೃಪ್ತಿಗಾಗಿ ಸಂಪೂರ್ಣ ಸ್ಥಿರಚಿತ್ತ ಮತ್ತು ಉಪಶಾಂತಿಯಿಂದ ಖರ್ಚು ಮಾಡುವವರ ಖರ್ಚಿನ ಉಪಮೆ- ಒಂದು ಉನ್ನತ ಪಾತಳಿಯಲ್ಲಿ ಒಂದು ಉದ್ಯಾನವಿದ್ದು ಚೆನ್ನಾಗಿ ಮಳೆಗರೆದಾಗ ಅದು ಇಮ್ಮಡಿ ಫ ಕೊಡುವಂತೆ ಮತ್ತು ಒಂದು ವೇಳೆ ಜಡಿಮಳೆ ಬಾರದಿದ್ದರೂ ಲಘುವಾದ ಜಿನುಗು ಮಳೆಯೂ ಅದಕ್ಕೆ ಸಾಕಾಗುವಂತೆ. ನೀವು ಮಾಡುವುದೆಲ್ಲಾ ಅಲ್ಲಾಹನ ವೀಕ್ಷಣೆಯಲ್ಲಿದೆ."**

**(ಪವಿತ್ರ ಕುರ್‌ಆನ್, 2:265)**

ಅಲ್ಲಾಹನ ಸಂಪ್ರೀತಿಯ ಜೊತೆ ಬಂದಿರುವ 'ಸಂಪೂರ್ಣ ಸ್ಥಿರಚಿತ್ತತೆ ಮತ್ತು ಉಪಶಾಂತಿಯಿಂದ' ಎಂಬುದಕ್ಕೆ ಮೂರು ಅರ್ಥಗಳನ್ನು ನೀಡಲಾಗುತ್ತದೆ. 1) ದಾನಧರ್ಮ ದಲ್ಲಿ ಅವರು ತಮ್ಮನ್ನು ಸ್ಥಿರವಾಗಿಸುತ್ತಾರೆ. ಅದರಿಂದ ಅವರಲ್ಲಿ ಆ ಸ್ಫೂರ್ತಿ ಹಾಸು ಹೊಕ್ಕಾಗುತ್ತದೆ. 2) ಪ್ರಾಮಾಣಿಕತೆಯನ್ನು ಪೂರ್ಣವಾಗಿ ಕಾಯ್ದುಕೊಳ್ಳುತ್ತಾರೆ. ಎಲ್ಲ ರೀತಿಯ ಕಾಪಟ್ಯಗಳಿಂದ ಪಾವನಗೊಳಿಸುತ್ತಾರೆ. ಅದು ಕುಸಿಯಲು ಬಿಡುವುದಿಲ್ಲ. ಅವರು ಹೃತ್ಪೂರ್ವಕ ಮತ್ತು ಅಲ್ಲಾಹನ ಶಿಕ್ಷೆ-ಪುರಸ್ಕಾರಗಳ ಕುರಿತು ದೃಢ ಪ್ರಜ್ಞೆಯಿಂದ ಖರ್ಚು ಮಾಡುತ್ತಾರೆ.

ಇತರರನ್ನು ಪ್ರೋತ್ಸಾಹಿಸಲಿಕ್ಕಾಗಿ ಮತ್ತು ಪುಣ್ಯ ಕರ್ಮಗಳಲ್ಲಿ ಜನರಿಗೆ ಆಸಕ್ತಿ ಮೂಡಿಸಲಿಕ್ಕಾಗಿ ದಾನ-ಧರ್ಮಗಳನ್ನು ಬಹಿರಂಗವಾಗಿ ಮಾಡುವುದಕ್ಕೆ ಅಡ್ಡಿಯಿಲ್ಲ.

ದೇ ವೇಳೆ ದಾನವನ್ನು ಪಡೆಯುವವರ ಆತ್ಮಾಭಿಮಾನಕ್ಕೆ ಧಕ್ಕೆಯಾಗದಂತೆ ಕೆಲ ುದರ್ಭಗಳಲ್ಲಿ ಗುಪ್ತವಾಗಿಯೂ ದಾನ ನೀಡಬೇಕಾಗುತ್ತದೆ. ಸಂದರ್ಭ ಮತ್ತು ಪರಿಸ್ಥಿತಿ ುನುಸಾರ ಈ ಎರಡು ವಿಧವೂ ಅಂಗೀಕಾರಾರ್ಹವಾಗಿದೆ. ಆದರೆ ಎಲ್ಲದರಲ್ಲಿಯೂ ್ರಮಾಣಿಕತೆಯಿರಬೇಕು. "ನಿಮ್ಮ ದಾನಧರ್ಮಗಳನ್ನು ಬಹಿರಂಗವಾಗಿ ಕೊಡುವುದಿದ್ದರೂ ಳ್ಳೆಯದೇ. ಆದರೆ ರಹಸ್ಯವಾಗಿ ಬಡಬಗ್ಗರಿಗೆ ಕೊಡುವುದು ಹೆಚ್ಚು ಉತ್ತಮ. ಈ ಮದಿಂದಾಗಿ ನಿಮ್ಮ ಹಲವಾರು ದೋಷಗಳು ಪರಿಹಾರಗೊಳ್ಳುವುವು. ಅಲ್ಲಾಹನಿಗಂತೂ ುವು ಮಾಡುತ್ತಿರುವುದರ ಅರಿವು ಇದ್ದೇ ಇದೆ." (ಪವಿತ್ರ ಕುರ್‌ಆನ್, 2:271)

ಗುಪ್ತವಾಗಿ ನೀಡುವ ದಾನಧರ್ಮಗಳಲ್ಲಿ ಡಾಂಬಿಕತೆ ಮತ್ತು ಕಾಪಟ್ಯದ ಸಾಧ್ಯತೆಯು ಹಳ ಕಡಿಮೆ. ಅದೇ ಅತ್ಯುತ್ತಮ ವಿಧಾನ. ಧಾರ್ಮಿಕ ಅಥವಾ ಸಾಮುದಾಯಿಕ ಹಿತಾಸಕ್ತಿ ಳಿಗೆ ಸಂಬಂಧ ಪಟ್ಟಿದ್ದರೆ ದಾನವನ್ನು ಗುಪ್ತವಾಗಿ ಮಾಡುವುದೇ ಹಿತಕರ. ಅದಕ್ಕೆ ಹೆಚ್ಚು ಣ್ಯವಿದೆಯೆಂದು ಪ್ರವಾದಿಯವರು(ಸ) ಹೇಳಿದ್ದಾರೆ. "ಅಂತ್ಯ ದಿನದಲ್ಲಿ ಯಾವ ನೆರಳೂ ಲ್ಲದಾಗ ಅಲ್ಲಾಹನ ನೆರಳು ದೊರೆಯುವ ಏಳು ವರ್ಗಗಳಲ್ಲಿ ಒಂದು, ಬಲಗೈ ಖರ್ಚು ಾಡಿದ್ದು ಎಡಗೈಗೆ ತಿಳಿಯದಂತೆ ಗುಪ್ತವಾಗಿ ದಾನ ನೀಡುವವರದ್ದಾಗಿದೆ."

(ಬುಖಾರಿ ಮುಸ್ಲಿಮ್)

# ಕಾಪಟ್ಯ ಮತ್ತು ಆಡಂಬರ ಪ್ರದರ್ಶನ

**ಕಾ**ಪಟ್ಯವು ಪ್ರಾಮಾಣಿಕತೆಯ ಹಂತಕವಾಗಿದೆ. ಕಾಪಟ್ಯದ ಪ್ರಭುತ್ವವಿರುವಲ್ಲಿ ್ರಮಾಣಿಕತೆಗೆ ಯಾವುದೇ ಸ್ಥಾನವಿರುವುದಿಲ್ಲ. ಪ್ರಾಮಾಣಿಕವಾಗಿ ಮಾಡಿದ ಸತ್ಕರ್ಮವು ುತ್ಯ ದಿನದಲ್ಲಿ ಪ್ರತಿಫಲಾರ್ಹವಾಗುತ್ತದೆ. ಕಾಪಟ್ಯವು ಅವುಗಳನ್ನು ನಿಷ್ಫಲಗೊಳಿಸುತ್ತದೆ. ್ರಮಾಣಿಕತೆಯು ದೇವನ ಕೃಪಾಕಟಾಕ್ಷಕ್ಕೆ ಪಾತ್ರವಾಗುತ್ತದೆ. ಕಾಪಟ್ಯವು ಆತನ ೀಪವನ್ನು ಆಹ್ವಾನಿಸುತ್ತದೆ. ಆದ್ದರಿಂದ ಕುರ್‌ಆನ್ ಮತ್ತು ಹದೀಸ್‌ಗಳಲ್ಲಿ ್ರಮಾಣಿಕತೆಯ ಬಗ್ಗೆ ಹೇಳಿರುವಂತೆಯೇ ಕಾಪಟ್ಯದ ಬಗ್ಗೆ ಎಚ್ಚರಿಕೆ ನೀಡಿ, ಅದರಿಂದ ರಾಗುವಂತೆ ಬೋಧಿಸಲಾಗಿದೆ. ಕಾಪಟ್ಯ ಮತ್ತು ಆಡಂಬರ ಪ್ರದರ್ಶನದ ವಾಂಛೆಯಿಂದ ರ್ಮಗಳು ನಿಷ್ಫಲವಾಗುವುದನ್ನು ಮತ್ತು ಪುಣ್ಯ ಫಲ ನಷ್ಟವಾಗುವುದನ್ನು ಕುರ್‌ಆನ್ ಗೆ ವರ್ಣಿಸಿದೆ.

"ಅಲ್ಲಾಹನಲ್ಲಿಯೂ ಅಂತ್ಯ ದಿನದಲ್ಲಿಯೂ ವಿಶ್ವಾಸವಿರಿಸದೆ ಕೇವಲ ಜನರಿಗೆ ೀರಿಸಲಿಕ್ಕಾಗಿ ಹಣ ವ್ಯಯಿಸುವವರ ಉಪಮೆಯು ಹೀಗಿದೆ: ಒಂದು ಸುದೃಢ ಬಂಡೆಯ ೀಲೆ ಸ್ವಲ್ಪ ಮಣ್ಣಿದೆ. ಜೋರಾಗಿ ಮಳೆ ಬಂದಾಗ ಮಣ್ಣೆಲ್ಲಾ ಕೊಚ್ಚಿ ಹೋಗಿ ಕೇವಲ ುಡೆಯು ಮಾತ್ರ ಉಳಿಯುತ್ತದೆ. ಇಂಥವರು ತಾವು ದಾನ ಮಾಡಿ ಸಂಪಾದಿಸಿರುವೆವೆಂದು

ಭಾವಿಸುವ ಪುಣ್ಯವು ಅವರಿಗೆ ದೊರೆಯಲಾರದು. ಸತ್ಯನಿಷೇಧಿಗಳಿಗೆ ಮಾರ್ಗದರ್ಶ ಮಾಡುವ ಪರಿಪಾಠವನ್ನು ಅಲ್ಲಾಹ್ ಇರಿಸಿಕೊಂಡಿಲ್ಲ."

(ಪವಿತ್ರ ಕುರ್‌ಆನ್, 2:26

ಇಲ್ಲಿ ಕಪಟತೆಯ ಜತೆಯಲ್ಲಿ ಅಲ್ಲಾಹ್ ಮತ್ತು ಅಂತ್ಯ ದಿನದಲ್ಲಿರುವ ವಿಶ್ವಾಸವನ ಪ್ರಸ್ತಾಪಿಸಲಾಗಿದೆ. ವಿಶ್ವಾಸವಿದ್ದರೆ ಮಾತ್ರ ಪ್ರಾಮಾಣಿಕತೆ ಹುಟ್ಟುತ್ತದೆ. ದೇವವಿಶ್ವಾ ಮತ್ತು ಪರಲೋಕ ವಿಶ್ವಾಸವಿಲ್ಲದ ಯಾವೊಂದು ಕರ್ಮವೂ ಕಾಪಟ್ಯ ಮತ್ತು ಆಡಂಬ ಪ್ರದರ್ಶನದಿಂದ ಮುಕ್ತವಾಗಿರಲು ಸಾಧ್ಯವಿಲ್ಲವೆಂಬ ಸತ್ಯವನ್ನು ಅದು ಸ್ಪಷ್ಟಪಡಿಸುತ್ತ

## ಖ್ಯಾತಿಗಾಗಿ ಸೇವೆ

ಖ್ಯಾತಿಯು ಲೌಕಿಕ ಬೇಡಿಕೆಗಳನ್ನು ಸಂಪಾದಿಸಬಹುದಾದ ಬಹಳ ಗೌರವಾಹ ಮಾರ್ಗವಾಗಿದೆ. ಸೇವೆಯು ಹೆಸರು ಮತ್ತು ಖ್ಯಾತಿ ಪಡೆಯುವ ಅತ್ಯುತ್ತಮ ಉಪಾ ಯಾಗಿದೆ. ಜನರ ಹಿತಾಕಾಂಕ್ಷಿ ಮತ್ತು ಸೇವಕನೆಂಬ ಹೆಸರು ಓರ್ವರಿಗೆ ದೊರೆತರೆ, ಅವ ಲೌಕಿಕತೆಯ ವಕ್ತಾರನಾಗಿದ್ದರೆ ಅದನ್ನು ಬಳಸಿ ಸಮಾಜದಲ್ಲಿ ಉನ್ನತ ಸ್ಥಾನ ಮ ಸಂಪತ್ತನ್ನು ಗಳಿಸಲು ಪ್ರಯತ್ನಿಸುತ್ತಾನೆ. ಅಂಥ ಮಂದಿ ಮಾನವರೊಂದಿಗೆ ಸಹಾನುಭೂ ಅಥವಾ ಅನುಕಂಪದಿಂದ ಸೇವೆ ಮಾಡುವುದಲ್ಲ. ಬದಲಾಗಿ ಸೇವೆ ಮತ್ತು ಉಪಕ ದಿಂದ ತನ್ನ ಲೌಕಿಕ ಬೇಡಿಕೆಗಳ ಸಂರಕ್ಷಣೆ ಮತ್ತು ಈಡೇರಿಕೆ ಮಾಡುತ್ತಾನೆ. ಅ ಸಾಧ್ಯತೆಯಿಲ್ಲದಿದ್ದರೆ ಅಲ್ಲಿ ಅವರ ಸೇವಾ ಮನೋಭಾವವು ತಣಿದು ಹೋಗುವುದು. ರೀತಿಯಲ್ಲಿ ಕೇವಲ ಖ್ಯಾತಿಯ ಉದ್ದೇಶದಿಂದ ಪುಣ್ಯ ಕರ್ಮಗಳನ್ನು ಮಾಡಿ ಅಲ್ಲಾಹನ ಶಿಕ್ಷೆ ಮತ್ತು ಕೋಪವನ್ನು ಆಹ್ವಾನಿಸಿದಂತಾಗುವುದು. ಇದರ ಬಗ್ಗೆ ಬ ಎಚ್ಚರಿಕೆಯನ್ನು ವಿವರಿಸುವಾಗ ಅಬೂಹುರೈರಾ(ರ) ಪದೇಪದೇ ಮೂರ್ಛಿತರಾಗಿದ್ದ ಮುಆವಿಯಾ(ರ) ಬಹಳವಾಗಿ ಅತ್ತಿದ್ದರು.

ಅಬೂ ಹುರೈರಾರಿಂದ(ರ) ವರದಿ: ಜನರ ಕರ್ಮಗಳಿಗೆ ತೀರ್ಪು ನೀಡಲಿಕ್ ಅಲ್ಲಾಹನು ಆಗಮಿಸಿದಾಗ ಮೂರು ವಿಧದ ಜನರ ತೀರ್ಪನ್ನು ಮೊದಲು ಮಾಡುವ ಆ ಪೈಕಿ ಓರ್ವನು ಹುತಾತ್ಮ. ಆತನನ್ನು ಹಾಜರುಪಡಿಸಿದಾಗ ಅಲ್ಲಾಹನು ಭೂಮಿಯ ಆತನಿಗೆ ನೀಡಿದ ಶಕ್ತಿ ಸಾಮರ್ಥ್ಯಗಳನ್ನು ಆತನಿಗೆ ನೆನಪಿಸುವನು. ಅವನು ಅದ ಒಪ್ಪುವನು. ಅನಂತರ, "ಈ ಅನುಗ್ರಹಕ್ಕೆ ಯಾವ ರೀತಿಯಲ್ಲಿ ಕೃತಜ್ಞತೆ ಸಲ್ಲಿಸಿದೆ. ನಿ ಸಾಮರ್ಥ್ಯವನ್ನು ಹೇಗೆ ವ್ಯಯಿಸಿದೆ?" ಎಂದು ಪ್ರಶ್ನಿಸಲಾಗುವುದು. ಆಗ ಅವನು, "ನಿ ಜಿಹಾದ್‌ನ ಆಜ್ಞೆಯನ್ನು ಅಕ್ಷರಶಃ ಪಾಲಿಸಿ, ನನ್ನ ಶಕ್ತಿಯನ್ನೆಲ್ಲ ನಿನ್ನ ಮಾರ್ಗದ ವ್ಯಯಿಸಿ, ನಿನ್ನ ಶತ್ರುಗಳ ವಿರುದ್ಧ ಹೋರಾಡಿ ಮರಣ ಹೊಂದಿದ್ದೇನೆ" ಎಂ ಹೇಳುವನು. ಅದಕ್ಕೆ ಅಲ್ಲಾಹನು ಹೀಗೆ ಉತ್ತರ ನೀಡುವನು, "ನೀನು ಸುಳ್ಳು ಹೇಳು ಜನರಿಂದ ಮಹಾಧೀರ ಮತ್ತು ಶೂರನೆಂದು ಹೇಳಿಸಲಿಕ್ಕಾಗಿ ನೀನು ಯುದ್ಧ ಮಾಡಿ

, ಶೌರ್ಯ ಪರಾಕ್ರಮಗಳ ಬಗ್ಗೆ ಲೋಕದಲ್ಲಿ ಚೆನ್ನಾಗಿ ಚರ್ಚೆಯಾಗಿರುವುದರಿಂದ ನಿನ್ನ ದ್ದೇಶ ಆ ಮೂಲಕ ಈಡೇರಿದೆ." ಅನಂತರ ಆತನನ್ನು ಬೋರಲಾಗಿ ನರಕಕ್ಕೆ ಎಸೆಯು ತೆ ಅಲ್ಲಾಹನು ಆಜ್ಞಾಪಿಸುವನು. ಆಜ್ಞೆಯನ್ನು ಜಾರಿಗೊಳಿಸಲಾಗುತ್ತದೆ. ಎರಡನೆಯದಾಗಿ ರ್ಜ ವಿದ್ವಾಂಸ ಮತ್ತು ಕುರ್‌ಆನ್ ಪಾರಾಯಣ ತಜ್ಞನನ್ನು ಹಾಜರುಪಡಿಸಲಾಗುವುದು. ನ್ನ ಗ್ರಂಥದ ಜ್ಞಾನದಿಂದ ನಿನ್ನನ್ನು ನಾನು ಅನುಗ್ರಹಿಸಿಲ್ಲವೇ?" ಎಂದು ಅಲ್ಲಾಹನು ನಿಗೆ ಜ್ಞಾಪಿಸುವನು. ಆತ ಹೌದೆಂದು ಒಪ್ಪುವನು. "ಆ ಅನುಗ್ರಹಕ್ಕೆ ನೀನು ಹೇಗೆ ಜ್ಞತೆ ಸಲ್ಲಿಸಿದೆ?" ಎಂದು ಕೇಳಿದಾಗ ಆತ ಈ ರೀತಿ ಉತ್ತರಿಸುವನು, "ನೀನು ನೀಡಿದ ನವನ್ನು ನಾನು ಪ್ರಚಾರಪಡಿಸಿ ಕುರ್‌ಆನ್ ಕಲಿತು, ದಿನರಾತ್ರಿಗಳಲ್ಲಿ ಅದನ್ನು ರಾಯಣ ಮಾಡಿದೆ." ಅಲ್ಲಾಹನು ಉತ್ತರಿಸುವನು, "ನೀನು ಮಹಾ ವಿದ್ವಾಂಸ ಮತ್ತು ರ್‌ಆನ್ ಪಾರಾಯಣಗಾರನೆಂದು ಜನರಿಂದ ಹೇಳಿಸಿಕೊಳ್ಳಲಿಕ್ಕಾಗಿ ನೀನು ಅವೆಲ್ಲವನ್ನೂ ಡಿರುವೆ. ಆ ಖ್ಯಾತಿಯು ನಿನಗೆ ದೊರೆತಿರುವುದರಿಂದ ನಿನ್ನ ಉದ್ದೇಶ ಈಡೇರಿದೆ." ನಂತರ ಅಲ್ಲಾಹನು ಅವನನ್ನೂ ಬೋರಲಾಗಿ ನರಕಕ್ಕೆ ಎಸೆಯಲು ಆಜ್ಞಾಪಿಸುವನು. ಜ್ಞೆಯನ್ನು ಜಾರಿಗೊಳಿಸಲಾಗುವುದು. ಮೂರನೆಯದಾಗಿ ಓರ್ವ ಶ್ರೀಮಂತನನ್ನು ಜರುಪಡಿಸಲಾಗುವುದು. ತಾನು ಮಾಡಿದ ಅನುಗ್ರಹಗಳನ್ನು ಅಲ್ಲಾಹನು ಆತನಿಗೆ ಪಿಸಿದಾಗ ಆತ ಒಪ್ಪಿಕೊಳ್ಳುವನು. "ಅದಕ್ಕೆ ನೀನು ಹೇಗೆ ಕೃತಜ್ಞತೆ ಸಲ್ಲಿಸಿದೆ" ಎಂಬ ಲ್ಲಾಹನ ಮುಂದಿನ ಪ್ರಶ್ನೆಗೆ ಆತ, "ನಾನು ಕುಟುಂಬ ಸಂಬಂಧವನ್ನು ಬೆಸೆದೆ. ಸತ್ಕರ್ಮ ಲ್ಲಿಯೂ ನೀನು ಮೆಚ್ಚುವ ಮಾರ್ಗದಲ್ಲಿಯೂ ಹಣ ವ್ಯಯಿಸಿದೆ" ಎಂದು ಆತ ತ್ತರಿಸುವನು. ಆಗ ಅಲ್ಲಾಹನ ಉತ್ತರ, "ನೀನು ಸುಳ್ಳು ಹೇಳುತ್ತಿರುವೆ. ನೀನು ದೊಡ್ಡ ಡುಗೈದಾನಿ ಮತ್ತು ಉದಾರಿಯೆಂದು ಜನರು ಕೊಂಡಾಡಬೇಕೆಂದು ಅವುಗಳನ್ನು ಡಿದೆ. ನಿನ್ನ ಧರ್ಮನಿಷ್ಠೆಯ ಬಗ್ಗೆ ಚೆನ್ನಾಗಿ ಚರ್ಚೆಯಾಗಿರುವುದರಿಂದ ನಿನ್ನ ಉದ್ದೇಶ ಡೇರಿದೆ." ಅನಂತರ ಆತನನ್ನೂ ನರಕಕ್ಕೆ ಎಸೆಯಲಾಗುವುದು.

(ಮುಸ್ಲಿಮ್, ತಿರ್ಮಿದಿ)

ಕಪಟ ನಟನೆ ಮತ್ತು ಪ್ರದರ್ಶನ ಪ್ರಿಯರಾದ ತನ್ನ ದಾಸರೊಡನೆ ಅಲ್ಲಾಹನು ಕೆಲವು ಮುಖ ಧಾರ್ಮಿಕ ಸೇವೆಗಳ ಬಗ್ಗೆ ವಿಚಾರಿಸುತ್ತಾನೆ. ಅವುಗಳನ್ನು ಜನಸೇವೆಯೆಂದೂ ರ್ಣಿಸಬಹುದು. ಜ್ಞಾನ ಪ್ರಸಾರ ಮತ್ತು ಒಳಿತಿನ ಕಾರ್ಯಗಳಲ್ಲಿ ಹಣ ವ್ಯಯವು ಪೂರ್ಣವಾಗಿ ದೇವನ ದಾಸರ ಸೇವೆಯಾಗಿದೆ. ಧರ್ಮದ ಸಂಸ್ಥಾಪನೆ ಮತ್ತು ಕ್ತಿನಿಂದ ಅಕ್ರಮ ಮತ್ತು ಅನ್ಯಾಯಗಳ ಉಚ್ಚಾಟನೆಗಾಗಿ ದೇವ ಮಾರ್ಗದಲ್ಲಿ ನಡೆಸುವ ರ್ಮ ಹೋರಾಟವು ಅದರ ವಿಶಾಲ ಪರಿಕಲ್ಪನೆಯಲ್ಲಿ ಜನಸೇವೆಯೇ ಆಗಿದೆ.

ಇಂಥ ಸೇವೆಗಳ ನೈಜ ಪ್ರೇರಣೆಯು ಖ್ಯಾತಿಯಾಗಿದ್ದರೆ ಅದರ ಪುಣ್ಯ ಮತ್ತು ತಿಫಲವು ನಷ್ಟವಾಗುವುದು. ಮಾತ್ರವಲ್ಲ ಮಾನವನು ಅಲ್ಲಾಹನ ಕೋಪಕ್ಕೆ ರಿಯಾಗುವನು.

## ಪ್ರತಿಫಲ ಬಯಸುವವರು

ಮನದಲ್ಲಿ ಪ್ರಾಮಾಣಿಕತೆಯಿರುವ ಮಂದಿ ಇತರರಿಂದ ಯಾವುದೇ ಪಾರಿತೋಷ ಅಥವಾ ಪ್ರತ್ಯುಪಕಾರ ಬಯಸುವುದಿಲ್ಲ. ಅವರು ಕೇವಲ ಅಲ್ಲಾಹನ ಸಂಪ್ರೀತಿಯ ಬಯಸುತ್ತಾರೆ. ಅವನ ಕರ್ಮಗಳಿಗೆ ಇತರ ಪ್ರೇರಣೆಗಳಿರುವುದಿಲ್ಲ.

ಅವರು ಮಾನವರೊಂದಿಗೆ ಸಹಾನುಭೂತಿ ಮತ್ತು ಅನುಕಂಪದಿಂದ ಹಣ ವೆ ಮಾಡುತ್ತಾರೆಯೇ ವಿನಾ ಪ್ರಶಂಸೆ ಮತ್ತು ಖ್ಯಾತಿಗಲ್ಲ. ಈ ಸಹಾನುಭೂತಿಯಿಂ ಯಾವುದೇ ಲೌಕಿಕ ಲಾಭ ಪಡೆಯಲು ಅವರು ಬಯಸುವುದಿಲ್ಲ. ಬದಲಾಗಿ ಅವ ಅದನ್ನು ತಮ್ಮ ಕರ್ತವ್ಯವೆಂದು ಪರಿಗಣಿಸಿ ಜನರ ಸೇವೆ ಮಾಡುವ ಸೌಭಾಗ್ಯವ ಕರುಣಿಸಿದ ದೇವನ ಮುಂದೆ ಕೃತಜ್ಞತೆಯಿಂದ ತಲೆ ಬಾಗುತ್ತಾರೆ. ಕುರ್‌ಆನ್ ಇದ ಈ ರೀತಿ ಚಿತ್ರಿಸಿದೆ. "ಮತ್ತು ಅಲ್ಲಾಹನ ಮೇಲಿನ ಪ್ರೇಮದಿಂದ ದರಿದ್ರರಿಗೂ ಅನಾಥರಿ ಸೆರೆಯಾಳುಗಳಿಗೂ ಊಟ ಕೊಡುತ್ತಾರೆ. (ಮತ್ತು ಅವರೊಡನೆ ಹೇಳುತ್ತಾರೆ,) ನಾವು ನಿವ ಕೇವಲ ಅಲ್ಲಾಹನಿಗಾಗಿ ಉಣಿಸುತ್ತಿದ್ದೇವೆ. ನಾವು ನಿಮ್ಮಿಂದ ಯಾವುದೇ ಪ್ರತಿಫಲವನ್ನಾಗ ಕೃತಜ್ಞತೆಯನ್ನಾಗಲಿ ಬಯಸುವುದಿಲ್ಲ. ನಮಗಂತು, ನಮ್ಮ ಪ್ರಭುವಿನಿಂದ ಆ ತೀ ಕಾಠಿಣ್ಯದ ಅತ್ಯಂತ ಸುದೀರ್ಘ ದಿನದ ಭಯವಿದೆ." (ಪವಿತ್ರ ಕುರ್‌ಆನ್, 76:8-1

ಇಷ್ಟೊಂದು ಉನ್ನತ ಮಟ್ಟದ ಚಾರಿತ್ರ್ಯವು ಸೇವಾ ಮನೋಭಾವ, ಅದರೊಂ ನಯ-ವಿನಯ, ಪ್ರಾಮಾಣಿಕತೆ ಮತ್ತು ನಿಷ್ಕಳಂಕತೆಯಿಂದ ಮಾತ್ರ ಹುಟ್ಟಿಕೊಳ್ಳಬಹು ಬೇರೆ ಪ್ರೇರಣೆಗಳಿಗೆ ಇಷ್ಟೊಂದು ಶಕ್ತಿ ಮತ್ತು ತೇಜಸ್ಸು ನೀಡಲು ಸಾಧ್ಯವಿಲ್ಲ. ಸದ್ಗು ಸಂಪನ್ನ ದಾಸರ ಕುರಿತು ಕುರ್‌ಆನ್‌ನಲ್ಲಿ ಇನ್ನೊಂದೆಡೆ ಹೀಗೆ ಹೇಳಲಾಗಿದೆ,

"ಅವರು ಸ್ಥಿತಿವಂತರಾಗಿರುವಾಗಲೂ ದುಸ್ಥಿತಿಯಲ್ಲಿರುವಾಗಲೂ ತಮ್ಮ ಸಂಪತ್ತ ಖರ್ಚು ಮಾಡುತ್ತಾರೆ, ಕೋಪವನ್ನು ನುಂಗಿ ಕೊಳ್ಳುತ್ತಾರೆ ಮತ್ತು ಇತರರ ಅಪರಾ ಗಳನ್ನು ಕ್ಷಮಿಸುತ್ತಾರೆ.- ಇಂತಹ ಸಜ್ಜನರು ಅಲ್ಲಾಹನಿಗೆ ಅತ್ಯಂತ ಮೆಚ್ಚುಗೆಯವರು (ಪವಿತ್ರ ಕುರ್‌ಆನ್, 3:13

ಈ ವಚನದಲ್ಲಿ ವಿವರಿಸಲಾಗಿರುವ ಸುಸ್ಥಿತಿ ಮತ್ತು ದುಃಸ್ಥಿತಿಯ ಕಾಲದ ಖರ್ಚು ಮಾಡುವುದು ಮತ್ತು ವ್ಯವಹಾರಗಳಲ್ಲಿ ಸೌಜನ್ಯ ತೋರಿಸುವುದು ಎಂ ಭಕ್ತರ ಎರಡು ಗುಣಗಳಿಗೆ ಪರಸ್ಪರ ಸಂಬಂಧವಿದೆ. ಮಾನವನು ಕೈ ಬಿಚ್ಚಿ ಇತರರಿಗ ವ್ಯಯಿಸುವಾಗ ನಾನೊಬ್ಬ ದೊಡ್ಡ ಮನುಷ್ಯ ಎಂಬ ಭಾವನೆ ಅವನ ಮನದ ಸಹಜವಾಗಿ ಮೂಡಬಹುದು. ಕನಿಷ್ಠಪಕ್ಷ ತನ್ನ ಔದಾರ್ಯಕ್ಕೆ ಪಾತ್ರರಾದವರನ್ನು ತನಗಿ ಕೆಳಗಿನವರೆಂದು ಆತನು ಭಾವಿಸುತ್ತಾನೆ. ಆದ್ದರಿಂದ ಅವರಿಂದಾಗುವ ಯಾವುದಾದ ಅವಮರ್ಯಾದೆ ಅಥವಾ ಪ್ರಮಾದವನ್ನು ಸಹಿಸಲು ಆತನಿಗೆ ಸಾಧ್ಯವಾಗುವುದೀ ಜನರ ಲೋಪ-ದೋಷಗಳನ್ನು ಕ್ಷಮಿಸಿ ಪುನಃ ಅವರ ಸೇವೆ ಮಾಡುವುದಕ್ಕೆ ಹೃದ ವೈಶಾಲ್ಯತೆ ಬೇಕು. ಧಾರಾಳವಾಗಿ ವ್ಯಯಿಸುವುದರ ಜತೆಗೆ ವಿನಯ ಮತ್ತು ವಿನಮ್ರತೆಯ

ಸ ದೇವದಾಸರ ಗುಣವಾಗಿರುವುದೆಂದು ಈ ವಚನವು ಸೂಚಿಸುತ್ತದೆ. ಅವರು ಾರನ್ನಾದರೂ ಆಕ್ಷೇಪಿಸಿ ನಿಂದಿಸುವುದಕ್ಕೆ ಅವಕಾಶ ಹುಡುಕುವುದಿಲ್ಲ. ಅವರು ತಪ್ಪು ಾಡಿದವರೊಡನೆ ದಾಕ್ಷಿಣ್ಯದ ಧೋರಣೆಯನ್ನು ತಳೆಯುತ್ತಾರೆ. ತನಗೆ ಅಕ್ರಮವೆಸಗಿ ಕ್ಕಾಗಿ ಆತನಿಗೆ ತನ್ನ ಸೇವೆಯನ್ನು ನಿಷೇಧಿಸುವುದಿಲ್ಲ. ಜನರ ತಪ್ಪು ಧೋರಣೆಯು ವಾಸಕ್ತಿಯನ್ನು ಬರಿದುಗೊಳಿಸುವುದಿಲ್ಲ. ಇಂಥ ಮಂದಿ ಮಾತ್ರ ದೇವ ಸಂಪ್ರೀತಿಯೆಂಬ ಹಾ ಸೌಭಾಗ್ಯಕ್ಕೆ ಪಾತ್ರರಾಗುತ್ತಾರೆ.

## ದಾರ್ಯವನ್ನು ಎತ್ತಿ ಹೇಳುವುದು

ಔದಾರ್ಯವನ್ನು ಎತ್ತಿ ಹೇಳುವುದನ್ನು ಅಕ್ಷಮ್ಯವೆಂದು ಇಸ್ಲಾಮ್ ಪರಿಗಣಿಸಿದೆ. ು ಮಾನವನ ಅಲ್ಪತನದ ಸಂಕೇತವಾಗಿದೆ. ಅಲ್ಲಾಹನು ಮಾನವನಿಗೆ ಮಾನಸಿಕ ಕ್ಷತ್ಯವನ್ನು ನೀಡಿ ಈ ದೌರ್ಬಲ್ಯದಿಂದ ಆತನನ್ನು ಮುಕ್ತಗೊಳಿಸುತ್ತಾನೆ. "ಅಲ್ಲಾಹನ ರ್ಗದಲ್ಲಿ ತಮ್ಮ ಸಂಪತ್ತನ್ನು ಖರ್ಚು ಮಾಡುವವರ, ಖರ್ಚು ಮಾಡಿದುದನ್ನು **ಕೊಳ್ಳದವರ ಮತ್ತು ಪರಪೀಡನಗೈಯದವರ ಪ್ರತಿಫಲವು ಅವರ ಪ್ರಭುವಿನ ಬಳಿ ಇದೆ. ರಿಗೆ ಯಾವತ್ತು ಭಯ ಮತ್ತು ವ್ಯಥೆಯ ಸಂಭವವಿಲ್ಲ."**

(ಪವಿತ್ರ ಕುರ್‌ಆನ್, 2:262)

ಕೃತಘ್ನರಾದ ಮಾನವರು ಯಾರಿಗಾದರೂ ಸೇವೆ ಮತ್ತು ಉಪಕಾರ ಮಾಡಿದರೆ ರಿಂದ ಉಪಕಾರ ಸ್ಮರಣೆಯನ್ನು ನಿರೀಕ್ಷಿಸುತ್ತಾರೆ. ನನ್ನ ಸೇವೆಯ ಫಲಾನುಭವಿಗಳು ನ್ನು ಗೌರವಿಸಬೇಕು. ನನ್ನ ಬೇಡಿಕೆ ಮತ್ತು ಆಜ್ಞೆಗಳನ್ನು ಶಿರಸಾ ಪಾಲಿಸಬೇಕೆಂದು ಹಿಸುತ್ತಾರೆ. ತನ್ನ ಅಭಿಲಾಷೆಯಂತೆ ಕಾರ್ಯ ನಡೆಯದಿದ್ದರೆ ಆತನು ತನ್ನ ಸೇವೆಯನ್ನು ಹೇಳಿ ತನ್ನ ಸೇವೆಗೆ ಪಾತ್ರರಾದವರನ್ನು ಪೀಡಿಸಿ ನಿಂದಿಸುತ್ತಾನೆ. ಈ ಮಾನಸಿಕ ಸೆಯು ಸಜ್ಜನರ ಮಟ್ಟಿಗೆ ದೈಹಿಕ ಹಿಂಸೆಗಿಂತ ಅಸಹ್ಯವಾಗಿದೆ.

ಔದಾರ್ಯವನ್ನು ಎತ್ತಿ ಹೇಳಿ ಯಾರ ಮನವನ್ನಾದರೂ ನೋಯಿಸುವುದಕ್ಕಿಂತ ಡು ಸವಿ ಮಾತುಗಳಿಂದ ಏನಾದರೂ ಹೇಳುವುದೇ ಕುರ್‌ಆನಿನ ದೃಷ್ಟಿಯಲ್ಲಿ ಉತ್ತಮ ಿದೆ. ಅದರಿಂದ ಅವನ ಸ್ವಾಭಿಮಾನಕ್ಕೆ ಧಕ್ಕೆಯಾಗುವುದಿಲ್ಲ. ನಾನೋರ್ವ ಸಜ್ಜನ ಗೂ ಅನುಕಂಪವುಳ್ಳವನೊಂದಿಗೆ ಸಂಬಂಧ ಹೊಂದಿದ್ದೇವೆಂದು ಆತನು ಭಾವಿಸುವನು.

**"ಒಂದು ಸವಿ ನುಡಿ ಮತ್ತು ಕ್ಷಮಾಗುಣವು ಮನನೋಯಿಸುವ ದಾನಕ್ಕಿಂತ ಉತ್ತಮ. ಲ್ಲಾಹ್ ನಿರಪೇಕ್ಷನು ಮತ್ತು ಸಹನಶೀಲತೆ ಅವನ ವಿಶೇಷತೆಯಾಗಿದೆ."**

(ಪವಿತ್ರ ಕುರ್‌ಆನ್, 2:263)

ಔದಾರ್ಯವನ್ನು ಎತ್ತಿ ಹೇಳುವುದರಿಂದ ಆ ಕರ್ಮವೇ ನಿಷ್ಫಲವಾಗುವ ಸಾಧ್ಯತೆಯಿರು ರಿಂದ ಕುರ್‌ಆನ್ ಆ ಬಗ್ಗೆ ಕಟ್ಟೆಚ್ಚರ ನೀಡಿದೆ.

**"ಓ ಸತ್ಯವಿಶ್ವಾಸಿಗಳೇ, ನೀವು ಉಪಕಾರ ಭಾರವಿರಿಸಿಯೂ ನೋಯಿಸಿಯೂ ನಿಮ್ಮ ಧರ್ಮಗಳನ್ನು ನಿಷ್ಫಲಗೊಳಿಸಬೇಡಿರಿ."** (ಪವಿತ್ರ ಕುರ್‌ಆನ್, 2:264)

ಈ ಬಗ್ಗೆ ಪ್ರವಾದಿ ವಚನಗಳಲ್ಲಿಯೂ ತೀವ್ರ ಎಚ್ಚರಿಕೆ ನೀಡಲಾಗಿದೆ. ಅಬೂದರ್
ವರದಿ: "ಅಂತ್ಯ ದಿನದಲ್ಲಿ ಅಲ್ಲಾಹನು ಮೂರು ವಿಧದ ಜನರನ್ನು ನೋಡಲಾರ
ಅವರೊಡನೆ ಮಾತನಾಡಲಾರನು. ಅವರಿಗೆ ಯಾತನಾಮಯ ಶಿಕ್ಷೆಯನ್ನು ಸಿದ್ಧಪ
ಲಾಗಿದೆ. 1. ಔದಾರ್ಯವನ್ನು ಎತ್ತಿ ಹೇಳುವಾತ, 2. ಸುಳ್ಳು ಆಣೆ ಹಾಕಿ ಸರಕು ಮಾರುವ
3. ಅಹಂಕಾರದಿಂದ ಬಟ್ಟೆಯ ತುದಿಯನ್ನು ನೆಲದಲ್ಲಿ ಎಳೆದು ನಡೆಯುವವ."

(ಮುಸ್ಲಿಮ

ಔದಾರ್ಯವನ್ನು ಎತ್ತಿ ಹೇಳಿ ಮಾನಸಿಕ ಹಿಂಸೆಯಿಂದ ತನ್ನ ಶ್ರೇಷ್ಠತೆಗೆ ಇತ
ಮನ್ನಣೆ ದೊರೆಯಬೇಕೆಂದು ಭಾವಿಸುವುದು ಅಲ್ಪತನವಾಗಿದೆ. ಇದು ಅವನ ಭ್ರ
ಯಾಗಿದೆ. ಲೌಕಿಕ ಹಿತಾಸಕ್ತಿ ಮತ್ತು ಉಪಕಾರ ಸ್ಮರಣೆಯ ನಿರೀಕ್ಷೆಯಿಲ್ಲದೆ ಮಾನ
ಸೇವೆ ಮಾಡುವವರಿಗೇ ಗೌರವ ಸಲ್ಲುತ್ತದೆ. ಅವರೇ ಮಾನವರಿಗೂ ಪ್ರಿಯರು, ದೇವನಿ
ಪ್ರಿಯರಾದವರು.